ಕಾದಂಬರಿಯಲ್ಲಿ ಬರುವ ಸಂಗತಿಯೊಂದು ಈ ವಿಚಾರವನ್ನು ಮಂಡಿಸುತ್ತದೆ. ಇದು ಹಳ್ಳಿಯಲ್ಲಿ ಹುಟ್ಟಿರುವ ಸಂಘದ ಕುರಿತಂತೆ ಇದೆ (ದಂಡೆ, ಪು. 174).

ಊರಿನ ಒಳಗೆ ಸಂಘ ಬಂದರೂ ಅರ್ಥಪೂರ್ಣವಾಗುವುದಿಲ್ಲ. ಕಾದಂಬರಿಯಲ್ಲಿ ನಿಜ ಜೀವನದ ಭಗ್ನತೆಯು ಚಿತ್ರಿತವಾಗಿರುವುದು ಗಮನಾರ್ಹ. ಒಂದು ಜನವರ್ಗ ರಾಷ್ಟ್ರೀಯತೆ; ಕರನಿರಾಕರಣೆ; ಉಪ್ಪಿನ ಸತ್ಯಾಗ್ರಹ ; ಮದ್ಯಪಾನವಿರೋಧ ಮುಂತಾದ ಮಹಾನ್ ನಿರೂಪಣೆಯನ್ನು ನಾವು ಚಿಂತಿಸುತ್ತೇವೆ. ಇದಕ್ಕೆ ತದ್ವಿರುದ್ಧವಾದ ಮತ್ತೊಂದು ಮಾದರಿಯ ಜನವರ್ಗ ಈ ಯಾವುದರ ಕುರಿತೂ ಯೋಚಿಸುವುದಿಲ್ಲ ಎಂಬುದನ್ನು ಮರೆಯುತ್ತೇವೆ. ಈ ವೈರುದ್ಯಗಳ ನಡುವಣ ಬಿಕ್ಕಟ್ಟನ್ನು ಚಿಕ್ಕಣ್ಣನವರು ಅರ್ಥಪೂರ್ಣವಾಗಿ ಚಿತ್ರಿಸಿದ್ದಾರೆ. ಅಥವಾ ಬೇರೊಂದು ಮಾತಲ್ಲಿ ಹೇಳಬೇಕೆಂದರೆ ಚಿಕ್ಕಣ್ಣನವರ ಕಾದಂಬರಿ/ಕಥೆಗಳ ವಿಸ್ತಾರ ಜಗತ್ತಿನಲ್ಲಿ ಕೆಲವರು ಮಾತ್ರ ಸ್ವ ಪ್ರಜ್ಞೆ ಮತ್ತು ಅರಿವನ್ನು ಹೊಂದಿದವರು. ಉದಾ : ದಂಡೆ ಕಾದಂಬರಿ 'ಗುರುರಾಜ' 'ನೆನಪುಗಳೇ ಹೀಗೆ' (ಕತೆ) ಜ ಪದ ಕಟ್ಟೆ ಕತೆಯ ಶಾನುಭೋಗ ಇತ್ಯಾದಿ.

ಮತ್ತೊಂದು ಸಂಗತಿಯೆಂದರೆ ಚಿಕ್ಕಣ್ಣನವರ ಕತೆಗಳಲ್ಲಿ ಮನುಷ್ಯನ ಅಂತರಂಗ ಮತ್ತು ಬಹಿರಂಗದ ವರ್ತನೆಗಳು ಆಯಾ ಸಂದರ್ಭಕ್ಕೆ ಅನುಸಾರವಾಗಿ ರೂಪುಗೊಳ್ಳುತ್ತವೆ. ಇದು ಚಿಕ್ಕಣ್ಣನವರ ಕತೆಗಳ ಪ್ರಧಾನ ನೆಲೆ. ಎರಡನೆಯದಾಗಿ ಚಿಕ್ಕಣ್ಣ ಬರೆದುದು ಮನುಷ್ಯ ಸಂಬಂಧದಲ್ಲಿ ಉಂಟಾಗುವ ಘರ್ಷಣೆಗಳ ಕುರಿತು.

*"ನಾನು ನನ್ನ ನಾಡಿನಲ್ಲಿ ಮಾತ್ರ ಜೀವಿಸಬಲ್ಲೆ,*
*........."*

ಎನ್ನುವ ನೆರೂದನ ವಾದವನ್ನು ಚಿಕ್ಕಣ್ಣ ಒಪ್ಪಿಕೊಳ್ಳುತ್ತಾರೆ. ಈ ದೃಷ್ಟಿಯಿಂದ ಅವರು ಬಳಸುವ ಭಾಷೆಯೂ ಕೂಡಾ ಪ್ರಾದೇಶಿಕ ಸಂಸ್ಕೃತಿಗೆ ಸಂಬಂಧಿಸಿದ್ದು.

*"ಗುಡಿಸಲ ಮುಂದಾರ ಕರಿ ಕಂಬಳಿ ಹಾಸಿಕೊಂಡು*
*ಅಳ್ಳೆ ಪಠಯನ ದಿಕ್ಕಿಗೆ ತಲೆ ಹಾಕಿ*
*ಅಕ್ಕ ತಂಗಿಯೋರ ಕಟ್ಟೆ ಕಡೆಗೆ ಮಕಮಾಡಿ*
*ತಲೆದಸಿಗೆ ಮರದ ತುಂಡು ಇಟಕೊಂಡು*
*ಮಲಗಿದ್ದ ಕಸ್ತೂರಿಗೆ ಹಾಡಿಹೊಗಳಿದ*
*ಹಿರಿಮೆಯೇನೂ ಕೇಳನಿಲ್ಲ (ಮುಂಜಾವು)*

ಈ ಮೇಲಿನ ಮಾತುಗಳನ್ನು ಗಮನಸಿ : ಇದು ಪ್ರಾದೇಶಿಕವಾದುದು ಕರ್ನಾಟಕದಲ್ಲಿ ಚಾಲ್ತಿಯಲ್ಲಿರುವ "ಏಕರೂಪಿ" ಭಾಷೆಯ ಕ್ರಮ ವಿರೋಧಿಸುವುದು ಮಾತ್ರವಲ್ಲ, ಅದರ ಮುಖೇನ ಪ್ರಾದೇಶಿಕ ಸಂಸ್ಕೃತಿ ಮತ್ತು ಭಾಷೆಯ ನಡುವಣ ಅಂತರ್ ಸಂಬಂಧವನ್ನು ಕೂಡಾ ನಿರೂಪಿಸುತ್ತದೆ. "ಮಕಮಾಡಿ" ಅನ್ನುವುದನ್ನು ಪಠ್ಯ ಪುಸ್ತಕಗಳು "ಮುಖಮಾಡಿ" ಎಂದು ಹೇಳಬಹುದು. ಆದರೆ ಇಲ್ಲಿ ಅದು ಅರ್ಥಪೂರ್ಣವಲ್ಲ.

"ಮುಂಜಾವು" ಕಾದಂಬರಿಯಲ್ಲಿ ಕುಂಬಾರ ಸಂಸ್ಕೃತಿ ಮತ್ತು ಅದರಲ್ಲಿನ ಜನರ ಜೀವನೋತ್ಸಾಹವನ್ನು ವಿವರಿಸುವಾಗ ಅದನ್ನು ಒಂದು ವಿವರಣೆಯೆಂಬಂತೆ ಚಿಕ್ಕಣ್ಣ ಬರೆದಿರುವುದು ಗಮನಾರ್ಹ. ಈ ಕಾದಂಬರಿಯಲ್ಲಿ ಬರುವ ವಿವರವು ಈಗ ನಾವು ಮಾತಾಡುವ ಸಾಂಸ್ಕೃತಿಕ ಎಡ-ಬಲದ ಪ್ರಶ್ನೆಯಲ್ಲ. 'ಮುಂಜಾವು' ಕಾದಂಬರಿಯಲ್ಲಿ ಚಿಕ್ಕಣ್ಣನವರು ಈ ಸಂಸ್ಕೃತಿಯು ಬದಲಾಗುವ ಕ್ರಮವನ್ನು ವಿವರಿಸುತ್ತಾರೆ. ಕುಂಬಾರ ಸಂಸ್ಕೃತಿಯು 'ಮುಂಜಾವು' ಕಾದಂಬರಿಯ ಮೂಲ ದ್ರವ್ಯವಾಗಿದೆ. ಕುಂಬಾರರಿಗೆ ಇರುವ ಸಾಂಸ್ಕೃತಿಕವಾದ ಮುಗ್ಧತೆಯನ್ನು ತಲ್ಲಣಗಳನ್ನು ಚಿಕ್ಕಣ್ಣ ಸೂಚಿಸಿದಂತೆ ಕಾಣುತ್ತದೆ. ಕತೆಯ ಓಟವೆಂಬ ಪ್ರಶ್ನೆಯನ್ನು ಬದಿಗಿರಿಸಿದರೆ ಈ ಕಾದಂಬರಿಯು ಒಂದು ಸಮಾಜಶಾಸ್ತ್ರೀಯವೆಂಬ ದಾಖಲೆಯ ಅಂಶವನ್ನು ಒಳಗೊಂಡಿದೆ. ಕನ್ನಡದ ಬಹುತೇಕ ಕಾದಂಬರಿಗಳು, ಕತೆಗಳು ಸಮಾಜಶಾಸ್ತ್ರದ ಅಂಶಗಳನ್ನು ಒಳಗೊಂಡೇ ರೂಪುಗೊಂಡಿವೆ. ವೈಯಕ್ತಿಕ ಗ್ರಹಿಕೆ, ಸಾಮಾಜಿಕ ಸೌಂದರ್ಯ ಶಾಸ್ತ್ರ ಮತ್ತು ಸಾಮಾಜಿಕ ವಾಸ್ತವ ಈ ಮೂರು ಅಂಶಗಳ ಒಟ್ಟಾರೆಯಾದ ಬೆರಕೆಯನ್ನು 'ದಂಡೆ', 'ಮುಂಜಾವು' ಕಾದಂಬರಿಗಳಲ್ಲಿ ಕಾಣಬಹುದು.

ಇಂಗ್ಲೀಷಿನ ರೊಮ್ಯಾಂಟಿಕ್ ಯುಗದಲ್ಲಿಯೂ ಸಾಹಿತ್ಯದಲ್ಲಿ ಸಮಾಜಶಾಸ್ತ್ರವೆಂಬ ಪ್ರಶ್ನೆಯು ಶುರುವಾಯಿತು. ಇದರಿಂದ ರೊಮ್ಯಾಂಟಿಕ್ ಯುಗದ ಕಾದಂಬರಿಗಳು ಕೆಲವು ವಿಶಿಷ್ಟ ಸಂಗತಿಗಳಿಗೆ ಪ್ರಾಶಸ್ತ್ಯವನ್ನು ನೀಡಿತು ಎಂದು ಫೆಡ್ರಿಕ್ ಜೇಮ್ಸನ್ ಹೇಳುತ್ತಾನೆ (**Fredric Jameson,** 1974, **P.** 5). ಚಿಕ್ಕಣ್ಣರ ಕತೆ-ಕಾದಂಬರಿಗಳಲ್ಲಿ ಇದೇ ರೀತಿಯ ಪ್ರಕ್ರಿಯೆಯು ಜರುಗಿದೆ. ಮುಂಜಾವು ಕಾದಂಬರಿಯಲ್ಲಿ ಕುಂಬಾರ ಜನಾಂಗದ ಸಾಮಾಜಿಕ ವಾಸ್ತವದ ಚಿತ್ರಣವನ್ನು ಲೇಖಕರು ಕೊಡುತ್ತಾರೆ ಎಂಬುದು ನಿಜ. ಈ ಕಾದಂಬರಿಯನ್ನು ಓದಿದಾಗ ನಮಗೆ ದೊರೆಯುವುದು ಆ ಜನಾಂಗದ ಬಗೆಗೆ ಒಂದು ಅಮೂರ್ತವಾದ ಜ್ಞಾನ ಮಾತ್ರ. ಹಾಗೂ ಈ ಕಾದಂಬರಿಯು ಕುಂಬಾರ ಜನಾಂಗದ ಬಗೆಗೆ ಪರಿಪೂರ್ಣವಾದ ಅನುಭವವನ್ನು ಕೊಡುವುದಿಲ್ಲ ; ಕೊಡಲು ಕಾದಂಬರಿಯ ರೂಪದಲ್ಲಿ ಬಹಳ ಕಷ್ಟಕೂಡಾ. ಕಾದಂಬರಿಯ ರೂಪದ ಬೆಳವಣಿಗೆಯಲ್ಲಿ ಆಂತರಿಕವಾದ ಕೆಲವು ತರ್ಕಗಳನ್ನು ಕಾಣಬಹುದು. ಮೊದಮೊದಲಿನ ವಾಸ್ತವವಾದಿ ಕಾದಂಬರಿಗಳಲ್ಲಿ ವಿವರಣೆ; ಚಾರಿತ್ರಿಕ ಹಿನ್ನೆಲೆ; ನಿರ್ದಿಷ್ಟ ವಿಷಯ ಹಾಗೂ ನಿರ್ದಿಷ್ಟ ಬಗೆಯ ಜೀವನ ಕ್ರಮ (ಉದಾ : ವೈಧವ್ಯ ; ಭಾರತೀಯ ಸಮಾಜದಲ್ಲಿ ಬ್ರಾಹ್ಮಣರು, ಗೌಡರು ಇತ್ಯಾದಿ) ಮುಂತಾದವುಗಳಿವೆ. "ಈ ರೀತಿಯ ವಿವರಣೆಯನ್ನು ಕಾದಂಬರಿಕಾರರು ಕಾದಂಬರಿಯಲ್ಲಿ ನೀಡುವುದಕ್ಕೆ ಯಾವುದೇ ರೀತಿಯ ನ್ಯಾಯ ಸಮ್ಮತವಾದ ರೀತಿ ರಿವಾಜುಗಳು ಬೇಕಿಲ್ಲ" (**Fredric Jameson,** 1974, **p.** 30). ಗ್ರಾಮ್ಯ ಭಾಷೆಯಲ್ಲಿ ಕಟ್ಟಿಕೊಡುವ ಚಿತ್ರಗಳೇ 'ದಂಡೆ', 'ಮುಂಜಾವು' ಕಾದಂಬರಿಗಳಲ್ಲಿ ಶಕ್ತಿಯಾಗಿರುತ್ತದೆ. ಒಂದು ಮಾದರಿಯ ಶಬ್ದಚಿತ್ರಗಳ ಮೂಲಕವೇ ಈ ರೀತಿಯ ಕಾದಂಬರಿಗಳು ಚಲಿಸುತ್ತವೆ. ಎರಡೂ ಕಾದಂಬರಿಗಳಲ್ಲಿ ಕತೆಯನ್ನು ನಿರೂಪಿಸುವ ತಂತ್ರಗಾರಿಕೆ ವಿಶಿಷ್ಟವಾಗಿದೆ.

ಒಂದು ಕುಂಬಾರ ಮನೆತನದ ಏಳು ಬೀಳಿನ ಸಂಗತಿಗಳನ್ನು ಈ "ಮುಂಜಾವು" ಕಾದಂಬರಿಯು ಬಿತ್ತರಿಸುತ್ತದೆ ಎಂಬುದನ್ನು ಈಗಾಗಲೇ ವಿವರಿಸಲಾಗಿದೆ. ಈ ಮನೆತನದಲ್ಲಿ

ಪರಂಪರೆಯು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವರ್ಗಾವಣೆ ಹೊಂದುತ್ತವೆ. ಹಾಗೆಯೇ ಇದರಲ್ಲಿ ತಲೆಮಾರುಗಳಲ್ಲಿನ ಮೌಲ್ಯಗಳ ಬಗೆಗಿನ ನಂಬಿಕೆಯೂ ಬದಲಾಗುತ್ತದೆ. ಇದನ್ನು ಲೇಖಕರು ವಿವರಿಸುವಾಗ ನಮಗೆ ಅದನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿಕೊಡುತ್ತಾರೆ (ಪು. 25–26). ಮೂಲತಃ ಈ ಬಗೆಯಲ್ಲಿ ಒಂದು ಕುಟುಂಬದ ಏಳು–ಬೀಳು ಮಹಾಕಾವ್ಯದ ರೀತಿಯಲ್ಲಿ ನಿರೂಪಣೆಗೆ ಒಳಗಾಗಿದೆ. ಹಾಗೂ ಈ ಕೃತಿಯು ಸಾಮಾಜಿಕ ಅನುಭವ ಮತ್ತು ಮಾನವೀಯ ಅಂತರ್ಗತ ಅನುಭವದ ಜಗತ್ತನ್ನು ಒಂದುಗೂಡಿಸುತ್ತದೆ. ಹೀಗಾಗಿ ಈ ಕಾದಂಬರಿಯಲ್ಲಿ ಹೀಗಾಗಿಯೇ ಮನುಷ್ಯನೇ ಕೇಂದ್ರ. "ದಂಡೆ" ಕಾದಂಬರಿಯಲ್ಲಿ ಮನುಷ್ಯ ಮತ್ತು ನಿಸರ್ಗದ ಸಂಬಂಧವನ್ನು ಮನುಷ್ಯ ಸಮಾಜ ; ಮನುಷ್ಯ ಮನುಷ್ಯರ ನಡುವಣ ಸಂಬಂಧವನ್ನು ಈ ಕಾದಂಬರಿಯು ಅಚ್ಚುಕಟ್ಟಾಗಿ ನಿರೂಪಿಸುತ್ತದೆ.

ಇಲ್ಲಿ ಒಂದು ಅಂಶವನ್ನು ನೆನಪಿಸಿಕೊಳ್ಳಬೇಕು. ಪುನರುಜ್ಜೀವನ ಕಾಲಘಟ್ಟದಲ್ಲಿ ಸಾಮಾನ್ಯವಾದ, ದಿನನತ್ಯವೆನ್ನಬಹುದಾದ ಸಂಗತಿಗಳೇ ಸಮಕಾಲೀನ ವಾಸ್ತವವಾಯಿತು. ಅದು ಆಗ ತಾನೇ ಉದಯವಾಗಿದ್ದ ಮದ್ಯಮವರ್ಗದ ಜೊತೆಗೆ ಸಂಬಂಧವನ್ನು ಪಡೆದುಕೊಂಡಿತ್ತು. ಪೂರ್ಣಪಾರದರ್ಶಕವಾದ ನಿಲುವು ಬೂರ್ಜ್ವಾವರ್ಗದ ಜೊತೆಗೆ ಸೇರಿದ ಸಂಗತಿಗಳನ್ನೇ ವಾಸ್ತವವೆಂದು ಕರೆಯಲಾಯಿತು. (**Raymond Williams, 1961, p. 274**) ಮತ್ತು ಹತ್ತೊಂಬತ್ತನೆಯ ಶತಮಾನದ ಯೂರೋಪಿನ ಕತೆಗಳನ್ನೆ ವಾಸ್ತವವಾದಿ ಪರಂಪರೆಯ ಕತೆಗಳೆಂದು ಕರೆಯಲಾಯಿತು (ಅದೇ). ಕನ್ನಡದ ಸಂದರ್ಭದಲ್ಲಿಯೂ ವಾಸ್ತವವಾದಿ ಪರಂಪರೆಯ ಕತೆಯು ತುಂಬಾ ಭಿನ್ನವಾದುದು ಎಂದು ಅನಿಸುವುದಿಲ್ಲ. ವಸಾಹತುಶಾಹಿ ಅನುಭವ ಅನಂತರ ಉದಯವಾದ ಗದ್ಯಮುಖಿ ಸಾಹಿತ್ಯದ ಶೈಲಿಯು ಈ ರೀತಿಯ ವಾಸ್ತವವನ್ನು ಎತ್ತಿ ಹಿಡಿಯಲು ಪ್ರಯತ್ನಿಸಿತು. ಚಿಕ್ಕಣ್ಣರ ಬಹುತೇಕ ಕತೆಗಳ ಪ್ರಮುಖ ವಸ್ತು ಜೀವನ ಕ್ರಮದ ಪಲ್ಲಟವನ್ನು ಸೂಚಿಸುವುದು ಹಾಗೂ ಬಹಿರ್ಮುಖವೆಂದು ಯಾವುದನ್ನು ನಾವು ಕರೆಯುತ್ತೇವೋ ಅದರ ಪರಿವರ್ತನೆಗಳನ್ನು ದಾಖಲಿಸುವುದು. ಈ ಕಾರಣಕ್ಕಾಗಿಯೇ ಚಿಕ್ಕಣ್ಣರ ಬರಹಕ್ಕೆ ತೂಕ ಬಂದಿದೆ.

ಚಿಕ್ಕಣ್ಣರ ಬರಹಗಳ ಮುಖ್ಯಕೇಂದ್ರ ಸಾಮಾಜಿಕರು. ಈ ಸಾಮಾಜಿಕರನ್ನು ತಮ್ಮ ಅನುಭವದ ಮುಖೇನವೇ ಲೇಖಕರು ವಿವರಿಸುತ್ತಾರೆ. ಅವರ ಪ್ರತಿಯೊಂದು ಕತೆಗಳಲ್ಲಿಯೂ ಗಂಭೀರವಾದ ಕಾರಣಗಳಿಗಾಗಿ ಪರಿವರ್ತನೆಗೆ ಗುರಿಯಾಗುವ ಜನಾಂಗವಿರುತ್ತದೆ ಮತ್ತು ಈ ಜನಾಂಗವು ಸಾಮಾನ್ಯ ಜೀವನವನ್ನು ನಡೆಸಿರುತ್ತದೆ. ಉದಾ : ಬೆಳ್ಳಕ್ಕಿ ಸಾಲಿನ ಮಾಲಿಂಗ / ಪೂಜಾರಪ್ಪ ಇತ್ಯಾದಿ.

ಚಿಕ್ಕಣ್ಣ ಅವರು ಕೆಲವು ಮಾದರಿಯ "ಅನಧಿಕೃತ ವ್ಯಕ್ತಿತ್ವ" ದಲ್ಲಿರುವ ಗುಣಗಳನ್ನು ಕಾದಂಬರಿಯಲ್ಲಿ ತಂದರು ಮತ್ತು ಕಾದಂಬರಿಯೆಂಬ ಜಗತ್ತನ್ನು ಹೆಚ್ಚು ಅಧಿಕೃತಗೊಳಿಸಿದರು ಎಂಬುದನ್ನು ಮರೆಯಲಾಗದು (ಕಸ್ತೂರಿ–ತಿಮ್ಮಾಜಿ).

ಸಾಹಿತ್ಯವೆನ್ನುವುದು ಸ್ವಾಯತ್ತವಲ್ಲ ಎಂಬ ನಂಬಿಕೆಯು ಚಿಕ್ಕಣ್ಣನವರಲ್ಲಿದೆ. ಸಾಹಿತ್ಯ ಕೃತಿಯ ಹಿನ್ನೆಲೆಯಲ್ಲಿರುವ ಸಾಮಾನ್ಯ ಜನರು. ಅವರ ಜೀವನ ಕ್ರಮ ಚಿಕ್ಕಣ್ಣನವರಿಗೆ

ಮುಖ್ಯ. "ಸತ್ಯವತಿ" ಕತೆಯಲ್ಲಿ ಬರುವ ಸತ್ಯವತಿ. 'ಸುಮ್ಮಾನ' ಕತೆಯ ಕಟಿರ ಈ ಪಾತ್ರಗಳನ್ನು ನೆನಪಿಸಬಹುದು. 'ಸುಮ್ಮಾನ' ಕತೆಯು ಪ್ರಾರಂಭವಾಗುವುದೇ ಹೀಗೆ :

'ಮಾಕನಳ್ಳಿಯ ಮೂಲೆ ಮನೆಯಿಂದಲೇ ಈ ಪ್ರಸಂಗವನ್ನು ಆರಂಭಿಸಬಹುದು. ಈ ಪ್ರಸಂಗದ ಮುಖ್ಯ ಪಾತ್ರಧಾರಿ ಕಟಿರ ಎಂಬ ಹುಡುಗ. ಹಾಗೆ ನೋಡಿದರೆ ಕಟಿರ ಎಂಬ ಹೆಸರೇ ಅವನವಲ್ಲ ಎಂಬ ಕಾರಣಕ್ಕೆ ಅವನನ್ನು ಕುಟಿರನೆನ್ನದೆ ಹೋದರೆ ಅವನೇ ಓ ಗೊಳ್ಳುವುದಿಲ್ಲ. ಈ ಪ್ರಸಂಗವನ್ನು ಬೆಳೆಸಲಾಗುವುದಿಲ್ಲ (ಕಂಟೇರಿ, ಪು. 127).

ಹಾಗೆ ನೋಡುವುದಿದ್ದರ ಈ ರೀತಿಯ ಪಾತ್ರಗಳು ಚಿಕ್ಕಣ್ಣರ ಹೆಚ್ಚಿನ ಕತೆಗಳಲ್ಲಿ ಬರುತ್ತವೆ. ಆದರೆ ಸತ್ಯವತಿ ಕತೆಯಲ್ಲಿ ಬರುವ ಸತ್ಯವತಿ ಎಲ್ಲರ ರೀತಿಯಲ್ಲಿ ಇರುವ ಹೆಣ್ಣಲ್ಲ. ಅವಳ ಸ್ವಭಾವವು ಅಸಹಜ **(Abnormal)** ಎನ್ನಬಹುದಾದ್ದು.

ಮಹಾಕಾವ್ಯ ಮತ್ತು ಕಾದಂಬರಿಯ ನಡುವಣ ವ್ಯತ್ಯಾಸವನ್ನು ಗುರುತಿಸುತ್ತಾ ಬಕ್ತಿನ್ ಕೆಲವು ಅಂಶಗಳನ್ನು ಪ್ರಸ್ತಾಪಿಸುತ್ತಾನೆ. ಮಹಾಕಾವ್ಯ ಮತ್ತು ದುರಂತ ನಾಟಕಗಳಲ್ಲಿರುವಂತೆ ಕಾದಂಬರಿಯು ನಾಯಕ ಕೇಂದ್ರಿತ ಗುಣವನ್ನು ಹೊಂದಿರುವುದಿಲ್ಲ. ಕಾದಂಬರಿಯ ನಾಯಕ ಬದಲಾಗದ ಸ್ಥಿತಿಯಲ್ಲಿ ಇರುವುದಿಲ್ಲ. ನಾಯಕನು ಕಾದಂಬರಿಯಲ್ಲಿ ಬೆಳೆಯುತ್ತಾನೆ. ಜೀವನದಿಂದ ಕಲಿಯುತ್ತಾನೆ **(Bakhtin, p. 10)**. "ಮುಂಜಾವು" "ದಂಡೆ" ಕಾದಂಬರಿಗಳಲ್ಲಿಯೂ ಈ ಪ್ರಕ್ರಿಯೆಯು ಜರುಗುತ್ತದೆ. ಆದರೆ ಬದುಕನ್ನು ಬಸಿಯುವ ಮತ್ತು ಅದರ ಜೊತೆಗೆ ಬೆಳೆಯುವ ಕ್ರಮವು ಈ ಕಾದಂಬರಿಗಳ ಮುಖ್ಯ ತಿರುಳು. ದಂಡೆ ಕಾದಂಬರಿಯ 'ಅವ್ವಯ್ಯ' 'ಮುಂಜಾವು' ಕಾದಂಬರಿಯ ಕಸ್ತೂರಿ, ತಿಮ್ಮಾಜಿ ಇತ್ಯಾದಿ.

ಹಳೆಯ ಜಮೀನುದಾರಿ ಪದ್ಧತಿಯ ಬದಲಾವಣೆ ಹಾಗೂ ಹೊಸದಾಗಿ ಪ್ರಾರಂಭವಾದ ಬಂಡವಾಳಶಾಹಿ ವ್ಯವಸ್ಥೆಯ ಪರಿಚಯದ ನಡುವೆ ವ್ಯಕ್ತಿಗೆ ವಿಶೇಷವಾದ ಸ್ಥಾನಮಾನವು ಲಭಿಸಿತು. ಬ್ರಿಟೀಷರಿಗೆ ಅನುಕೂಲವಾದ ಬೃಹತ್ ಉದ್ದಿಮೆ; ರೈಲ್ವೇ; ಬಂಡವಾಳ ಹೂಡಿಕೆ; ಶಿಕ್ಷಣ ಮುಂತಾದವು ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ಸಾಂಸ್ಕೃತಿಕ ಬದಲಾವಣೆಗೆ ಕಾರಣವಾಯಿತಷ್ಟೇ. ಬದಲಾಗುತ್ತಿರುವ ಸಾಂಸ್ಕೃತಿಕ ಸನ್ನಿವೇಶದಲ್ಲಿ 'ವ್ಯಕ್ತಿಯಾಗಿ' ಮನುಷ್ಯ ಏನಾಗಬೇಕು? ಮತ್ತು ಅವರ ಮುಂದಿರುವ ಸವಾಲುಗಳು ಹಾಗೂ ವ್ಯಕ್ತಿಯ ಮುಂದಿರಬೇಕಾದ ಆದರ್ಶಗಳ ಕ್ರಿಯಾತ್ಮಕ ಸ್ವರೂಪದ ಸಂಕೀರ್ಣತೆಯೇನು ಎಂಬುದನ್ನೇ ಲೇಖಕರು ಕೆಲವು ಕತೆಗಳಲ್ಲಿ ಶೋಧಿಸುತ್ತಾರೆ. ಇದರೊಂದಿಗೆ ನವೋದಯ ಕಾಲದ ಕಾರಂತ ಮತ್ತು ಕುವೆಂಪು ಬರಹ ನೆನಪಿಸಿಕೊಳ್ಳಬಹುದು.

ಅಷ್ಟೇ ಅಲ್ಲ, ಯಾವುದನ್ನು ನಾವು ಪ್ರಗತಿಪರ ಕಲ್ಪನೆಯೆಂದು ಕರೆಯುತ್ತೇವೋ ಅದು ಕೇವಲ ಏಕ ಕೇಂದ್ರಿತವಾದ ; ಪ್ರತ್ಯೇಕವಾದ ಚಿಂತನೆಯ ಕ್ರಮವಲ್ಲ. ಅಭಿವೃದ್ದಿಯನ್ನು ಸಾಧಿಸಬೇಕಾದರೆ ಆಧುನಿಕ ಜ್ಞಾನದ ಮಾದರಿಯನ್ನು ಕೂಡಾ ಬಳಸಿಕೊಳ್ಳಬೇಕೆಂದು ರಾಷ್ಟ್ರೀಯತಾವಾದಿ ಕೆಲವು ಚಿಂತಕರು ಭಾವಿಸಿಕೊಂಡಿದ್ದರು. ಇದರಿಂದ ಆಗಿನ ಪ್ರಗತಿಪರ ಚಿಂತನೆಯೆಂದರೆ, ಆಯಾ ಸಂದರ್ಭದ ಸಾಮಾಜಿಕ ನಂಬಿಕೆಗಳ ಪರಿಶೀಲನೆ ಎಂಬಂತಾಯಿತು.

ಈ ಮಾದರಿಯ ಚಿಂತನೆಗೂ ಪಶ್ಚಿಮದ ಆಧುನಿಕ ಕೈಗಾರಿಕಾ ಸಂಸ್ಕೃತಿಗೂ ಸಂಬಂಧವಿದೆ. ಇದರ ಪರಿಣಾಮವಾಗಿ ವಸಾಹತುಶಾಹಿ ರಾಷ್ಟ್ರಗಳಲ್ಲಿ ವೈಜ್ಞಾನಿಕ ಪರಿಶೀಲನೆಯೆಂದರೆ ಏಕಕಾಲಕ್ಕೆ ಅದು ಮಿಶ್ರ ಸಾಂಸ್ಕೃತಿಕ (Cross Cultural) ರೂಪವಾಗಿತ್ತು ಮತ್ತು ಅಚಾರಿತ್ರಿಕ ಸಮೀಕರಣದ ರೂಪವನ್ನು ಅದು ಪಡೆದುಕೊಂಡಿತ್ತು. ಪಶ್ಚಿಮದ ಎನ್‌ಲೈಟನ್‌ಮೆಂಟ್ ಯುಗದ ಜ್ಞಾನ ರೂಪಗಳು ; ವೈಜ್ಞಾನಿಕ ಚಿಂತನೆಗಳು ; ಪರಿಸರ ವಿಜ್ಞಾನದ ಮಾದರಿಗಳು ಹೇಗಿತ್ತು ಎಂದರೆ – ಮನುಷ್ಯ ತನ್ನ ಸಾಮರ್ಥ್ಯದ ಬಲದಿಂದಲೇ ಪರಿಸರದ ಮೇಲೆ ಹಿಡಿತ ಸಾಧಿಸಬಹುದು ಎಂಬುದೇ ಆಗಿತ್ತು. ಈ ತರಹದ ಚಿಂತನೆಯ ಕ್ರಮದಲ್ಲಿ ಮನುಷ್ಯನೇ ಕೇಂದ್ರ ಆಸಕ್ತಿಯಾಗಿದ್ದ. ಪ್ರಗತಿ ; ಮನುಷ್ಯರ ಬಗೆಗಿನ ಆಸಕ್ತಿ ; ಅವನ ಕೌಶಲದ ಪ್ರಶ್ನೆ ಮುಂತಾದವು ಅಧಿಕಾರದ ಜೊತೆಗಿನ ಸಂಬಂಧವೇ ಆಗಿತ್ತು ಎಂಬುದು ಬೇರೆ ಚಿಂತನೆಗೆ ಅವಕಾಶ ಕಲ್ಪಿಸುತ್ತದೆ. ಸ್ವಾತಂತ್ರ್ಯದ ಅನಂತರ 1970ರ ದಶಕದ ಲೇಖಕರ ಸಮಸ್ಯೆ ಬೇರೆಯ ಮಾದರಿಯದಾಗಿತ್ತು. 1970 ಅನಂತರದಲ್ಲಿ ವೈಜ್ಞಾನಿಕ ದೃಷ್ಟಿಕೋನವೆಂದರೆ, ಅದು ಸ್ವಜ್ಞಾನ ಮತ್ತು ಬೇರೆಯೆಂಬ ದ್ವಂದ್ವಾತ್ಮಕ ಪರಿಕಲ್ಪನೆಯನ್ನು ಒಳಗೊಂಡಿತ್ತು. ಹೀಗಾಗಿಯೇ ವೈಜ್ಞಾನಿಕ ಮನೋಧರ್ಮ ; ಪ್ರಗತಿಪರ ಚಿಂತನೆ ಎಂಬುದಕ್ಕೆ ವಸಾಹತುಶಾಹಿ ಅನುಭವಕ್ಕೆ ಒಳಗಾದ ರಾಷ್ಟ್ರಗಳಲ್ಲಿ ವಿಶಿಷ್ಟವಾದ ನಡಿಗೆ ಇದೆ ಹಾಗೂ ವೈಜ್ಞಾನಿಕ ಮನೋಧರ್ಮ ವಿಶ್ವಾತ್ಮಕತೆಯನ್ನು ಒಳಗೊಂಡಿದ್ದು, ಅದು ಸಾಪೇಕ್ಷವಾಗಿದೆ. ಎಪ್ಪತ್ತರ ದಶಕದ ಲೇಖಕರು ಈ ಪ್ರಶ್ನೆಯನ್ನು ಬೇರೆ ಬೇರೆ ರೀತಿಯಲ್ಲಿ ಬಿಡಿಸಲು ಯತ್ನಿಸಿದರು. ಚಿಕ್ಕಣ್ಣರ 'ಮುಂಜಾವು' ಮತ್ತು 'ದಂಡೆ' ಎರಡು ಕಾದಂಬರಿಗಳಲ್ಲಿ ಬರುವ ಮುಖ್ಯ ಪ್ರಶ್ನೆ ಇದು : ಸಾಮಾನ್ಯ ಮನುಷ್ಯರ ಜೀವನ ಕ್ರಮವೆಂದರೆ ಅದು ತನ್ನದೇ ಸಮಸ್ಯೆಯನ್ನು ಒಳಗೊಂಡಿದೆ. ನಾವೀಗ ಮಾತಾಡುವ ವೈಜ್ಞಾನಿಕತೆಯು 'ಕವಳಕತೆ'ಯ ನರುಸಪ್ಪನಿಗೆ ಅನ್ವಯವಾಗುವುದಿಲ್ಲ. ಇದು ಬುದ್ಧಿಜೀವಿಗಳಿಗೆ ಅರ್ಥವಾಗದ ಸಮಸ್ಯೆಯೂ ಹೌದು.

ವಸಾಹತೋತ್ತರ ಕಾಲದಲ್ಲಿ 'ಅವಕಾಶ'ದ ಪರಿಕಲ್ಪನೆಯು ಬದಲಾಯಿತು. ಚರಿತ್ರೆಯೆಂಬುದಕ್ಕೆ ಹೊಸ ನಿರ್ವಚನಗಳು ಪ್ರಾರಂಭವಾದವು. ಹೊಸ ವ್ಯಾಖ್ಯೆಗಳು ಎರಡು ಮಾದರಿಯಾಗಿದ್ದವು ಎಂಬುದನ್ನು ಮರೆಯಬಾರದು. ದೇಶೀಯ ಜನರ (ಪೌರಾತ್ಯವಾದಿಗಳ) ಚಾರಿತ್ರಿಕ ನಿರೂಪಣೆಗಳು ಒಂದು ಮಾದರಿಯದು. ಮತ್ತೊಂದು ಯುರೋಪಿಯನ್ ಚಿಂತನೆಯ ಕ್ರಮದ್ದು ; "ಚಾರಿತ್ರಿಕ" ಮಾನದಂಡಗಳು ಬೇರೆ. ಯುರೋಪ್ ಮೂಲದ ವಿದ್ವಾಂಸರು ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆಯೇ ಇಲ್ಲವೆಂದು ಪ್ರತಿಪಾದಿಸಿದರು. ಈ ಪ್ರಶ್ನೆಗಳು ಬಹಳ ತೊಡಕಿನವು ಎಂಬುದು ಕೂಡಾ ಅಷ್ಟೇ ಮುಖ್ಯವಾದುದು. ಚಾರಿತ್ರಿಕ (ಭೂತಕಾಲ) ಪ್ರಜ್ಞೆಯ ಬಗೆಗೆ ಈಗ ಬಹಳ ನಡೆಯುತ್ತಿದೆ.

1. ಯುರೋಪ್ ಕೇಂದ್ರಿತ ವಿದ್ವಾಂಸರು ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆಯಿಲ್ಲವೆಂದರು.

2. ಈ ನಿರೂಪಣೆಗೆ ವಿರುದ್ಧವಾಗಿ ಭೂತಕಾಲವನ್ನು ಕಟ್ಟುವವರು ಇದ್ದಾರೆ.

ಈ ಪ್ರಶ್ನೆಗಳು 'ಇವೆ' 'ಇಲ್ಲ' ಎಂಬುದರ ಮೇಲೆ ತನ್ನ ಗಮನ ಹರಿಸಿವೆ. ಇದರ ಆಚೆಗೆ ಎರಡು ಮೂರು ಸಂಗತಿಗಳನ್ನು ಗಮನಕ್ಕೆ ತಂದುಕೊಳ್ಳಬಹುದು : ನಾವು ಮಾಮೂಲಿಯಾಗಿ ಮಾತಾಡುವ ಅಂಶವೆಂದರೆ 'ನಿನ್ನೆ ಏನಾಗಿತ್ತು ಗೊತ್ತಾ?' ಇದು ಕೂಡಾ ನಿನ್ನೆಯನ್ನು ನೆನಪಿಸಿಕೊಳ್ಳುತ್ತದೆ ಮತ್ತು ಮರುಕಟ್ಟುತ್ತದೆ. "ಕಂಡೇರಿ" ಸಂಕಲನದ ಹೆಚ್ಚಿನ ಕತೆಗಳು ಗ್ರಾಮ ಜೀವನದ ಚರಿತ್ರೆಯನ್ನು ಪುನರ್ ಕಟ್ಟಿವೆ. ಅಷ್ಟೇ ಅಲ್ಲ, ಯಾವುದನ್ನು ನಾವು ವಾಸ್ತವವಾಗಿ ರಾಷ್ಟ್ರೀಯತೆ ಎಂದು ಕರೆದೆವೋ ಅದಕ್ಕೆ ಒಂದು ಮುಖ ಮಾತ್ರವೇ ಇಲ್ಲ. ಒಂದೆಡೆಯಿಂದ ಅದಕ್ಕೆ ರಾಜಕೀಯ ಮುಖವಿದೆ. ಮತ್ತೊಂದು ಕಡೆಯಿಂದ ನೈತಿಕ ಆದರ್ಶವಿದೆ. ರಾಷ್ಟ್ರೀಯ ಏಕತೆ ಮತ್ತು ನೈತಿಕ ಧರ್ಮಗಳು ಒಂದರೊಡನೊಂದು ಬೆಸೆದುಕೊಂಡಿರುವುದೂ ಹೌದು. ಸತ್ಯಾಗ್ರಹಕ್ಕೆ ಭಾರತೀಯ ಸನಾತನ ವ್ಯಾಖ್ಯೆ ಇರುವ ಹಾಗೆಯೇ ಸ್ವಾತಂತ್ರ್ಯ ಹೋರಾಟಗಾರರು ಕಟ್ಟಿಕೊಟ್ಟ ವ್ಯಾಖ್ಯೆಗಳೇ ಬೇರೆ ನಿರೂಪಣೆಯಾಗಿತ್ತು. ಸತ್ಯ, ನ್ಯಾಯ, ಧರ್ಮ, ಅಹಿಂಸೆ ಇವೆಲ್ಲಾ ಧಾರ್ಮಿಕ ಪರಿಭಾಷೆಗಳು. ಆದರೆ ಸ್ವಾತಂತ್ರ್ಯ ಹೋರಾಟಗಾರರು ತಮಗೆ ಬೇಕಾದಂತೆ ಹೊಸ ಕಾಲಕ್ಕೆ ತಕ್ಕಂತೆ ನಿರೂಪಿಸಿದರು. ಸ್ವಾತಂತ್ರ್ಯ ಹೋರಾಟಗಾರರು ಎರಡು ಸಂಗತಿಗಳು ಪ್ರಸ್ತಾವಿಸಿದರು. ಒಂದು ರಾಷ್ಟ್ರೀಯತೆಯು ರಾಜಕೀಯ ಏಕತೆಯ ಪ್ರಶ್ನೆ, ಎರಡನೆಯದು ಹೋರಾಟಕ್ಕೆ ಒಂದು ನೈತಿಕ ಏಕತೆಯು ಮುಖ್ಯವಾಯಿತು. ಸ್ವಾತಂತ್ರ್ಯ ಹೋರಾಟದ ಮುಖ್ಯ ಉದ್ದೇಶ ಸ್ವಾತಂತ್ರ್ಯವನ್ನು ಪಡೆದುಕೊಳ್ಳುವುದು. ಇಲ್ಲಿ ಗಮನಿಸಬೇಕಾದುದು – ಸ್ವಾತಂತ್ರ್ಯದ ಪರಿಕಲ್ಪನೆ. ಭಾರತೀಯ ವೇದಾಂತಗಳಲ್ಲಿ 'ಸ್ವಾತಂತ್ರ್ಯ'ವೆಂಬ ಪರಿಭಾಷೆಯಿರಲಿಲ್ಲ. "ದೇಹವನ್ನು ಹಳೆಯ ವಸ್ತ್ರವೆಂದು ಭಾವಿಸಬೇಕು. ಯಾವಾಗ ದೇಹವೆಂಬ ಹಳೆಯ ವಸ್ತ್ರವನ್ನು ತ್ಯಜಿಸಿದಾಗ ಆತ್ಮನಿಗೆ ಮುಕ್ತಿ ದೊರೆಯುತ್ತದೆ. ಮತ್ತೆ ದೇಹವನ್ನು ತ್ಯಜಿಸಿ ಹೊಸ ವಸ್ತ್ರವನ್ನು ಧರಿಸಬೇಕಾಗುತ್ತದೆ" (ಭಗವದ್ಗೀತೆ). ಹೀಗಾಗಿ ಸ್ವಾತಂತ್ರ್ಯ ಹೋರಾಟವೆಂಬುದು ಹೊಸ ವ್ಯಾಖ್ಯೆಯಾಯಿತು. ಯಾರು ಸ್ವಾತಂತ್ರ್ಯ ಹೋರಾಟವನ್ನು ಮಾಡಲು ತೊಡಗಿದರೋ ಅವರದು ಪ್ರತ್ಯೇಕ ವರ್ಗವಾಯಿತು. ಈ ವರ್ಗವು ಬಳಸಿರುವ ಅನೇಕ ಪರಿಭಾಷೆಗಳು ಜನಸಾಮಾನ್ಯರಿಗೆ ಅರ್ಥವಾಗುವಂತಿರಲಿಲ್ಲ. ಹೀಗಾಗಿ ರಾಷ್ಟ್ರೀಯ ಆಂದೋಲನವು ಬಳಸಿದ 'ಆದರ್ಶ' ಪರಿಭಾಷೆಗಳು ಎಲ್ಲರಿಗೂ ಅರ್ಥವಾಗಿರಲಿಲ್ಲ. ಜನಸಾಮಾನ್ಯರಿಗೆ ಸ್ವಾತಂತ್ರ್ಯ ಎನ್ನುವುದು ಪರಕೀಯವಾದ ಪರಿಕಲ್ಪನೆ. 'ಬೆಳ್ಳಕ್ಕಿ ಸಾಲು' ಕತೆಯ ಮಾಲಿಂಗ ಅನಾಥ. ಅವನಗೆ ಅವನದ್ದೇ ಅನ್ನಬಹುದಾದ ಆದರ್ಶವಿಲ್ಲ. 'ಸ್ವಾತಂತ್ರ್ಯ' ಅವನ ಮಟ್ಟಿಗೆ ಪರಕೀಯ ಪರಿಕಲ್ಪನೆ. 'ಸುಮ್ಮಾನ' ಕತೆಯ ಕಟೀರನಗೆ ಆ ಹೆಸರು ಹೇಗೆ ಬಂತು ಎಂದು ಗೊತ್ತಿಲ್ಲ. ಹೀಗಾಗಿ ಅವನಿಗೆ ಸ್ವಾತಂತ್ರ್ಯವಿಲ್ಲದ ದುಸ್ಥಿತಿ.

ಸ್ವಾತಂತ್ರ್ಯ ಹೋರಾಟದಲ್ಲಿ 'ಸ್ವಾತಂತ್ರ್ಯ' ಮತ್ತು "ದೇಶೀಯ ಅಭಿವೃದ್ಧಿ"ಯು ಮುಖ್ಯ ಪ್ರಶ್ನೆಯಾಯಿತು. ಯಾವಾಗ ನಮ್ಮ ಸ್ವಾತಂತ್ರ್ಯವೆಂಬ ಪರಿಕಲ್ಪನೆಯು ಬಂತೋ, ಆವಾಗಲೇ "ದೇಶೀಯ ಅಭಿವೃದ್ಧಿ" ಎಂಬ ಪರಿಕಲ್ಪನೆಯು ಮುಂದೆ ಬಂತು. ಸಾಮಾನ್ಯ ಮತ್ತು ಮಧ್ಯಮ ವರ್ಗದ ಸಾಂಸ್ಕೃತಿಕ ನಂಬಿಕೆಗಳ ಮೇಲೆ ವಸಾಹತು ಸಂಸ್ಕೃತಿ ಮತ್ತು ರಾಷ್ಟ್ರೀಯತಾವಾದಿ ಸಂಸ್ಕೃತಿಯೆಂಬ ಪರಿಕಲ್ಪನೆಗಳು ಬಂದ ಮೇಲೆ ಮಧ್ಯಮ ವರ್ಗದವರ

ಸಾಂಸ್ಕೃತಿಕ ನಂಬಿಕೆಗಳು ನಿಧಾನವಾಗಿ ಬೇರೆ ಬೇರೆ ರೂಪಗಳನ್ನು ಪಡೆದವು. ಜನಸಾಮಾನ್ಯರಿಗೆ ಇದ್ದ ಸಾಂಸ್ಕೃತಿಕ ನಂಬಿಕೆಗಳು ಪ್ರಗತಿಪರ ದೃಷ್ಟಿಕೋನದ ಸ್ವಾತಂತ್ರ್ಯ ಹೋರಾಟಗಾರರಿಗೆ ಮುಖ್ಯವಾಗಲಿಲ್ಲ. ಇಲ್ಲಿ "ಕರಗವ್ವ" ಕತೆಯ ಕರಗವ್ವನನ್ನು ನೆನಪಿಸಿಕೊಳ್ಳಬಹುದು.

ಇಲ್ಲಿಯೇ ಇನ್ನೊಂದು ಅಂಶವನ್ನು ನಾವು ಗಮನಿಸಬೇಕು. ರಾಷ್ಟ್ರೀಯತಾವಾದಿ ಆಂದೋಲನಕಾರರಿಗೆ 'ಅಭಿವೃದ್ಧಿ', 'ಸ್ವಾತಂತ್ರ್ಯ', 'ರಾಷ್ಟ್ರೀಯ ಏಕತೆ'ಯೆಂಬ ಮಹಾನಿರೂಪಣೆಗಳು ಮುಖ್ಯವೆಂದು ಅನಿಸಿತು. ಅಕ್ಷರಸ್ಥರಿಗೆ (ಇವರೂ ವಸಾಹತು ಶಿಕ್ಷಣದಿಂದ ಹುಟ್ಟಿಕೊಂಡ ಕೂಸುಗಳು), ನಮ್ಮ ದೇಶದ ಸ್ವಾತಂತ್ರ್ಯವೆಂದರೆ ಪರಂಗಿಯವರಿಂದ ಬಿಡುಗಡೆ. ಅದು ಮುಖ್ಯ ಪ್ರಶ್ನೆಯೆಂದು ಅವರು ಪ್ರತಿಪಾದಿಸಿದ ಗಳಿಗೆಯಲ್ಲಿಯೇ ನಮ್ಮ ನಮ್ಮ ನಡುವಣ ಆಂತರಿಕ ಭಿನ್ನಾಭಿಪ್ರಾಯಗಳು ಮುಖ್ಯವಲ್ಲ ಎಂದು ಪ್ರತಿಪಾದಿಸಿದರು. ಬ್ರಿಟಿಷರು ಅಲೆಮಾರಿಗಳನ್ನು ; ಬುಡಕಟ್ಟು ಜನಾಂಗದವರನ್ನು ಠಕ್ಕರೆಂದು, ಕಳ್ಳರೆಂದು, ಸುಲಿಗೆ ಕೋರರರೆಂದು, ಅಪರಾಧಿಗಳೆಂದು ಭಾವಿಸಿದ್ದರು. ಅದೇ ರೀತಿಯಲ್ಲಿ ರಾಷ್ಟ್ರೀಯತಾವಾದಿಗಳು ಕೂಡಾ ಅಲೆಮಾರಿಗಳ ಬಗ್ಗೆ, ಬುಡಕಟ್ಟು ಜನಾಂಗದವರ ಕುರಿತು ಹೆಚ್ಚು ಮಾತಾಡಿರಲಿಲ್ಲ. ಭಾರತೀಯ ಸಂಸ್ಕೃತಿಗೆ ಬಹಳ ದೊಡ್ಡ ಸಾಂಸ್ಕೃತಿಕ ಪರಂಪರೆಯಿದೆ. ಅದು ಹರಪ್ಪ – ಮೊಹೆಂಜಾದಾರ ಸಂಸ್ಕೃತಿಯಿಂದ ಪ್ರಾರಂಭವಾಗಿದೆ (ನೆಹರೂ ಅವರ ಮಗಳಿಗೆ ತಂದೆಯ ಓಲೆಗಳು : **Discovery of India** ಕೃತಿಗಳನ್ನು ಈ ಹಿನ್ನೆಲೆಯಿಂದ ಗಮನಿಸಬೇಕು). ಆಗಿನ ಕಾಂಗ್ರೆಸ್ ಪ್ರಮುಖವಾಗಿ "ಮೊದಲು ನಾವೆಲ್ಲರೂ ಸಣ್ಣಪುಟ್ಟ ಭಿನ್ನಾಭಿಪ್ರಾಯಗಳನ್ನು ಬಿಟ್ಟು ಸ್ವಾತಂತ್ರ್ಯವನ್ನು ಪಡೆಯಬೇಕು" ಎಂದು ಪ್ರತಿಪಾದಿಸಿತು. ಕುತೂಹಲದಾಯಕ ಸಂಗತಿಯೆಂದರೆ ಅಲೆಮಾರಿಗಳಿಗೆ ; ಬುಡಕಟ್ಟು ಜನಾಂಗಕ್ಕೆ 'ಸ್ವಾತಂತ್ರ್ಯ', 'ಹೋರಾಟ' ಇತ್ಯಾದಿಗಳು ತಿಳಿದಿರಲಿಲ್ಲ. ಅವರದು ಮೌನ ಅಥವಾ ನಿರ್ಲಕ್ಷ್ಯ ಮಾತ್ರ. ಅವರಿಗೆ ಸ್ವಾತಂತ್ರ್ಯ ; ಗಾಂಧಿ ಅಥವಾ "ಗೋಡ್ವಿನ್" ಸಾಹೇಬ ಮುಖ್ಯವಾಗಿರಲಿಲ್ಲ. ಯಾವುದನ್ನು ನಾವು ಅಭಿವೃದ್ಧಿಪರ ಯುರೋಪ್ **(Great Britain)** ಎಂದು ಕರೆಯುತ್ತೇವೆಯೋ ಅದು ಹೊಸ ರೀತಿಯ ಚಾರಿತ್ರಿಕತೆಯ ಕಡೆಗೆ ಮುಖ ಮಾಡಿತು.

1. ಕೃಷಿ ಅಭಿವೃದ್ಧಿ ಮತ್ತು ಮನುಷ್ಯರ ಜೀವನದಲ್ಲಿ ಪಾವಿತ್ರ್ಯ ಉಳಿಸಿಕೊಳ್ಳಬೇಕು ಎಂದು ಭಾವಿಸಲಾಯಿತು. ಚಿಕ್ಕಣ್ಣರ ಕತೆಗಳಲ್ಲಿ ಕೃಷಿ, ಅಭಿವೃದ್ಧಿಯ ಪ್ರಶ್ನೆ ಮುಖ್ಯವಾಗಿಲ್ಲ. ಅವರಿಗೆ ಸಾಮಾನ್ಯ ಜನರ ಸಾಮಾನ್ಯ ಸಂಗತಿಗಳು ಮಾತ್ರ ಮುಖ್ಯ.

2. ಎರಡನೆಯದಾಗಿ ಸಾಂಸ್ಕೃತಿಕ ಬದಲಾವಣೆಗಳು. ಇದು ಆಧುನಿಕ ನಾಗರಿಕತೆಯು ಹುಟ್ಟಲು ಕಾರಣವಾಯಿತು. ಆಧುನಿಕ ನಾಗರಿಕತೆಯ ದೆಸೆಯಿಂದ ನಗರಗಳ ಸ್ವರೂಪ ಬದಲಾಯಿತು. ಧಾರ್ಮಿಕ ಚಿಂತನೆಗಳು ಬರವಣಿಗೆಯ ರೂಪಕ್ಕೆ ಇಳಿಯಿತು. ಕೆಲಸದ ವರ್ಗೀಕರಣದ ತತ್ವ ಉದಯಿಸಿತು. ಈ ಚಿಂತನೆಗಳ ಪ್ರಭಾವ ಮಧ್ಯ ಏಷ್ಯಾದಲ್ಲಿ ಕಾಣಿಸಿಕೊಂಡಿತು. ಹೊಸ ನಾಗರಿಕತೆಯಲ್ಲಿ ಎಲ್ಲಾ ರೀತಿಯ

ಚಿಂತನೆಗಳ ಸ್ವರೂಪ ಬದಲಾಯಿತು. ಹೊಸ ನಾಗರಿಕತೆ ಮತ್ತು ಕಬ್ಬಿಣದ ಉದಯವೆಂದು ಕರೆಯುತ್ತೇವೆಯೋ ಅದು ಮೊದಲು ಮಧ್ಯ ಏಷ್ಯಾದಲ್ಲಿ ಕಾಣಿಸಿಕೊಳ್ಳುವುದಕ್ಕಿಂತ ಮೊದಲು ಯುರೋಪಿನಲ್ಲಿ ಪ್ರಾರಂಭವಾಗಿತ್ತು. ಪ್ರಾಚೀನ ಗ್ರೀಸ್ ದೇಶದಲ್ಲಿ ಚಾಲ್ತಿಯಲ್ಲಿದ್ದ ಪ್ರಜಾಪ್ರಭುತ್ವದ ಮಾದರಿಯನ್ನು ಯುರೋಪ್ ದೇಶಕ್ಕೂ ಅನ್ವಯಿಸಿತು. ಅಷ್ಟೇ ಅಲ್ಲ ಶುದ್ಧ ವಿಜ್ಞಾನ (**Pure Science**) ಗಣಿತ ಶಾಸ್ತ್ರ , ತತ್ವಜ್ಞಾನ, ಚರಿತ್ರೆ ಮತ್ತು ಭೂಗೋಲದ ಬಗೆಗಿನ ಚಿಂತನೆಗಳು ಪಠ್ಯ ಕ್ರಮಕ್ಕೂ ಬೇಕಾಯಿತು. ಈ ರೀತಿಯ ನಾಗರಿಕತೆಯು ಮನುಷ್ಯನನ್ನು ನೋಡುವುದು ಅವನ ಉದ್ಯೋಗದ ಮೂಲಕವೇ. ಯಾವಾಗ ಒಬ್ಬ ವ್ಯಕ್ತಿ ನಿವೃತ್ತಿ ಹೊಂದುತ್ತಾನೋ ಆವಾಗ ಅವನಿಗೆ ಅಧಿಕಾರವಿಲ್ಲ. ಕಚೇರಿಯ ಜನರೇ ಅವನನ್ನು ನಿರ್ಲಕ್ಷಿಸುತ್ತಾರೆ. 'ನಿರ್ಗಮನ' ಕತೆಯು ಹೇಳುವುದು ಈ ಅಂಶಗಳನ್ನು.

ವರ್ಗಕೇಂದ್ರಿತ ಸಮಾಜ ಮತ್ತು ವರ್ಗ ಸಮರ ಗ್ರೀಕೋ ರೋಮನ್ ಪ್ರದೇಶದಲ್ಲಿ ಹುಟ್ಟಿಕೊಂಡಿತು. ರೋಮನ್ಸ್ ಧರ್ಮ ಮತ್ತು ಅದರ ಹಿಂದಿರುವ ಪ್ರಭುತ್ವದ ಶಕ್ತಿಯು ಹೊಸ ರೀತಿಯ ಸಮಾಜವನ್ನು ಸೃಷ್ಟಿಸಿತು (**Great Imperial State**). ಅದರ ತಾತ್ವಿಕ ನಂಬಿಕೆಗಳು ಉಳಿದ ಯುರೋಪ್ ಸಾಮ್ರಾಜ್ಯಗಳಿಗೂ ಪಸರಿಸಿತು. ಸರಿಸುಮಾರು ಇದೇ ಸಂದರ್ಭದಲ್ಲಿ ಯುರೋಪಿನಲ್ಲಿ ತಾಂತ್ರಿಕತೆಯು ಪ್ರಾರಂಭವಾಯಿತು. ತಂತ್ರಜ್ಞಾನ, ವಿಜ್ಞಾನ ಯುರೋಪ್‌ನಲ್ಲಿ ಹುಟ್ಟಿದ ದೆಸೆಯಿಂದಾಗಿ ಯುರೋಪ್‌ನಲ್ಲಿ ಮೇಲರಿಮೆ (**Superiority**) ಗೆ ಕಾರಣವಾಯಿತು. ಯುರೋಪಿನ ಜನರು ಕೂಡಾ ತಾವು ಬೇರೆಯವರಿಗಿಂತ ಮೇಲ್ದರ್ಜೆಯವರು ಎಂದು ತಿಳಿದುಕೊಂಡರು. ಇದರ ಜೊತೆಗೆ ಕೆಲವು ಅಂಶಗಳನ್ನು ನಾವು ಗಮನಿಸಬೇಕು. ಆಗ ಪ್ರಾರಂಭವಾದ ಕಚೇರಿಗಳು, ಅದಕ್ಕೆ ಹೊಸದಾಗಿ ಬಂದ ಅಧಿಕಾರಿಗಳು ಭಾರತೀಯರಿಗೆ ಪರಕೀಯರಂತೆ ಕಾಣಿಸಿತು. ಆದರೆ ಈಗಿನ ಅಧಿಕಾರಿಗಳು ಕೂಡಾ ಗ್ರಾಮೀಣ ಜನರಿಗೆ ಪರಕೀಯರಂತೆ ಕಾಣಿಸುತ್ತದೆ. ಈ ಹಿನ್ನೆಲೆಯಲ್ಲಿ "ಓಡುವ ಗಿಡಮರಗಳೊಂದಿಗೆ" ಕತೆಯು ಜೀವನದ ವೈವಿಧ್ಯತೆಯೊಂದಿಗೆ ಬದುಕುವುದು ಹೇಗೆ ಎಂಬುದನ್ನು ಸೂಚಿಸುತ್ತದೆ. ರೈಲಿನಲ್ಲಿ ಪ್ರಯಾಣಿಸುವ ಸಂದರ್ಭದ ಒಂದು ಘಟನೆ ಮಾತ್ರ ಇಲ್ಲಿ ಕೇಂದ್ರ

"ಕರಗವ್ವ" ಕತೆಯಲ್ಲಿ ಒಂದು ಕತೆಯೊಂದಿಗೆ ಮತ್ತೊಂದು ಬೆಸೆದುಕೊಂಡಿದೆ.

ಹಾಗೆಯೇ 'ಕವಳ', 'ಕರಗವ್ವ', 'ಮುಂಗಾರು ಮಳೆಯ ಸಂಜೆ' ಮುಂತಾದ ಕತೆಗಳನ್ನು ಓದುವಾಗ ಕತೆಗಳಲ್ಲಿ ಬರುವ ಪಾತ್ರಗಳು ಏಕಾಂತವಾದಿಯಾಗಿರುವ ಪಾತ್ರಗಳಲ್ಲ ಎಂದು ಅನಿಸುತ್ತದೆ. ಈ ಯಾವ ಪಾತ್ರಗಳು ಸಾಂಸ್ಕೃತಿಕ, ಸಾಮಾಜಿಕವಾಗಿ ಪ್ರತ್ಯೇಕಗೊಂಡ ಪಾತ್ರಗಳಲ್ಲ ಎಂದು ತಿಳಿಯುತ್ತದೆ.

ಈ ಕೆಳಗಿನ ವಿವರವನ್ನು ಗಮನಿಸಬೇಕು :

**ಯುರೋಪಿನ ಚಿಂತನೆಯ ಕ್ರಮ ವಸಾಹತುಕಾಲದ ಸ್ಥಿತಿ (ಪರೋಕ್ಷ ಅಥವಾ ನೇರವಲ್ಲದ ವಿವರಣೆಗಳು)**

1. ಸಂಶೋಧನೆಯ ವಿವಿಧತೆ – ಅನುಕರಣೆ – "ನಿಶಬುದೆಡೆಗೆ", ಮಿರ್ಲೆ
2. ಪ್ರಗತಿಪರತೆ ಮತ್ತು ಬೌದ್ಧಿಕ ಶ್ರೀಮಂತಿಕೆ –ಸಾಂಪ್ರದಾಯಿಕ ಮನಸ್ಸು ಮತ್ತು ಭಾವುಕತೆ – ಸೂಮ್ಮಾನ ಕತೆ
3. ಅಮೂರ್ತ ಚಿಂತನೆಗಳು ಕೂಡಾ ಮುಖ್ಯ –ಮೂರ್ತರೂಪದ ಚಿಂತನೆ ಕೂಡಾ ಅಷ್ಟೇ ಅಗತ್ಯ – ಗೌತಮ ಕತೆಯ ಮನುಷ್ಯ ಸಂಬಂಧಗಳು
4. ಸೈದ್ಧಾಂತಿಕ ತಳಹದಿ (**Theoretical reasoning**) – ವಿವರಣಾತ್ಮಕ ಚಿಂತನೆ, ಪ್ರಾಯೋಗಿಕ ಮನಸ್ಸು, 'ಹಸಿರುಹರಳಿನುಂಗುರ'
5. ನಿಶ್ಚಿತ ಮನೋಸ್ಥಿತಿ –ದೇಹ – 'ಹಸಿರುಹರಳಿನುಂಗುರ' ಕತೆಯ ಲಕ್ಷ್ಮಿ
6. ಶಿಸ್ತು ಮುಖ್ಯ – ಸ್ಫೂರ್ತಿ ಮುಖ್ಯ – ದೊರೆ
7. ಪ್ರಬುದ್ಧತೆ – ಮುಗ್ಧತೆ – ಕಟೀರ
8. ಅಭಿವೃದ್ಧಿ – ಚಲನರಾಹಿತ್ಯಸ್ಥಿತಿ – ಗ್ರಾಮೀಣ ವ್ಯವಸ್ಥೆ **(J.M. Blant, History Inside out, p. 1707)**

1870ರ ಅನಂತರ ಯುರೋಪಿಯನ್ ಚಿಂತಕರಲ್ಲಿ ಒಂದು ವಿಶಿಷ್ಟ ಬೌದ್ಧಿಕ ಚಿಂತನೆಗಳು ಪ್ರಾರಂಭವಾಯಿತು. ಈ ಚಿಂತಕರು ವಿಕಾಸವಾದಿ ಸಿದ್ಧಾಂತವನ್ನು ಒಪ್ಪಿಕೊಂಡಿದ್ದರು. ಇದರ ಮೂಲಕ ಜಗತ್ತನ್ನು ವಿವರಿಸಲು ಪ್ರಯತ್ನಿಸಿದರು. ಈ ತಾತ್ವಿಕತೆಯ ಮುಖಾಂತರ ಸಮಾಜ, ಪ್ರಭುತ್ವ, ಜನರ ಮನೋಭಾವ ಅವರ ಮಾನಸಿಕ ಸ್ಥಿತಿಗಳನ್ನು ವಿವರಿಸುವ ಮೂಲಕ ಚರಿತ್ರೆಯೆಂದರೇನು? ಶಿಲಾಯುಗವೆಂದರೇನು? ಶಿಲಾಯುಗದ ಅನಂತರ ಏನಾಯಿತು? ಈ ಪರಿಭಾಷೆಗಳಲ್ಲಿಯೇ ಶಿಲಾಯುಗ, ಕಬ್ಬಿಣದ ಯುಗ, ಯಂತ್ರನಾಗರಿಕತೆಯ ಯುಗಗಳನ್ನು ಗುರುತಿಸುವ ಪರಿಪಾಠ ಪ್ರಾರಂಭವಾಯಿತು. ಸಾಮಾಜಿಕ ಅಭಿವೃದ್ಧಿಗೂ – ವಿಕಾಸವಾದಿ ಸಿದ್ಧಾಂತಕ್ಕೂ ಹೀಗೆ ಸಂಬಂಧವನ್ನು ಕಲ್ಪಿಸಲಾಯಿತು. ಕೃಷಿಯಲ್ಲಿ ಯಂತ್ರೋಪಕರಣದ ಬಳಕೆಯಿಂದ – ಕೃಷಿಯ ಉತ್ಪನ್ನಗಳು ಹೆಚ್ಚಾಗುತ್ತವೆಯೆಂದು ಹೇಳಲಾಯಿತು. ಕಬ್ಬಿಣದ ಉಪಯೋಗವು – ಲೋಹದ ಕಡೆಗೆ ತಿರುಗಿದಾಗ ಅಲ್ಲಿ ಒಂದು ರೀತಿಯ ಚಾರಿತ್ರಿಕ ವಿಕಾಸವನ್ನು ಕಾಣಬಹುದು ಎಂದು ವಿದ್ವಾಂಸರು ಚರ್ಚಿಸಿದರು. ಈ ವಿಕಾಸವು ಸುಲಭ ಸಾಧ್ಯವಲ್ಲ. ಆದರೆ ಚಾರಿತ್ರಿಕ ಬೆಳವಣಿಗೆಯಲ್ಲಿ ತಾಂತ್ರಿಕತೆಯು ಬಳಕೆಯಾಗುತ್ತಿರುವಂತೆ ಮನುಷ್ಯ ದೇಹದ ಅಂಗಾಂಗಗಳಲ್ಲಿ ಬದಲಾಯಿತು (ವಿವರಗಳಿಗೆ : **"Eversince Darwin" – Stephn J. Gold** ಕೃತಿಯನ್ನು ಗಮನಸಬಹುದು.

ಈ ಸಮಾಜವನ್ನು ನೋಡುವಾಗ ಮತ್ತು ಅರ್ಥಮಾಡಿಕೊಳ್ಳುವಾಗ ಕೆಲವು ಪದಗಳನ್ನು ಬಳಸುತ್ತೇವೆ. ಅಭಿವೃದ್ಧಿ **X** ಅನಭಿವೃದ್ಧಿ ; ನಾಗರಿಕ **X** ಅನಾಗರಿಕ ಮುಂತಾದ ಪರಿಕಲ್ಪನೆಗಳು ಇದರಿಂದ ಉಂಟಾದವು. ಆದುದರಿಂದ ಗ್ರಾಮೀಣ ಪ್ರದೇಶದಲ್ಲಿ ವಾಸಿಸುವವರು ಅನಾಗರಿಕರು ಎಂದೇ ಪ್ರತಿಪಾದಿಸಿದವು. ಚಿಕ್ಕಣ್ಣ ಈ ಯುರೋಪಿಯನ್ ಪ್ರಭೇದವನ್ನು ಒಪ್ಪುವುದಿಲ್ಲ.

ವಿಶಾಲವಾದ ಅರ್ಥದಲ್ಲಿ ಚಿಕ್ಕಣ್ಣ ಮಾನವೀಯ ಅಂತಃಕರಣ ಮತ್ತು ಮಾನವೀಯ ಅನುಕಂಪ ಹಾಗೂ ಮಾನವೀಯ ಪ್ರೀತಿ ಮುಂತಾದ ಅಂಶಗಳನ್ನು ಮಾತ್ರವೇ ತಮ್ಮ ಗಣನೆಗೆ ತಂದುಕೊಂಡಿದ್ದಾರೆ.

ಪ್ರಾದೇಶಿಕತೆಯು ಕೂಡಾ ಮೂಲತಃ ಬಳಸಿಕೊಂಡಿರುವುದು ಮೇಲಿನ ಪರಿಭಾಷೆಯನ್ನೆ :

1. ತಾರ್ಕಿಕತೆ ಮತ್ತು ಸಮತೋಲನ ದೃಷ್ಟಿ
2. ಪ್ರಾದೇಶಿಕತೆಗೆ ಇರಬೇಕಾದ ಸ್ಥಿರತೆ
3. ಪ್ರತಿಯೊಂದು ಪ್ರದೇಶಕ್ಕೂ ಕಟ್ಟಿಕೊಂಡ ಗಡಿರೇಖೆಗಳು

ಇವು ಚಿಕ್ಕಣ್ಣನವರಿಗೆ ಮುಖ್ಯ.

ಮಾನವಶಾಸ್ತ್ರವು ಹೊರಟ ಸಮತೋಲಿನ ದೃಷ್ಟಿಯು ಕೂಡಾ ಎರಡು ಮಾದರಿಗಳಿಂದ ಹೊರಟವು.

ಅ) ಪ್ರತಿಯೊಂದು ಸಾಮಾಜಿಕ ವ್ಯವಸ್ಥೆಗೂ, ಸಂಸ್ಕೃತಿಗೂ ಅದರದ್ದೇ ಅನ್ನಬಹುದಾದ ದೃಢತೆಯಿರುತ್ತದೆ (ಮುಂಜಾವು).

ಆ) ಸಾಂಸ್ಕೃತಿಕ ಸಂವಾದಿತನ (**Relativism**) ಮತ್ತು ಸಂಸ್ಕೃತಿಗೆ ಇರುವ ಆಂತರಿಕ ಮೌಲ್ಯಗಳು (ನಿಶಬುದ ದಡೆಗೆ).

ನಾವೀಗ ಯೋಚಿಸುತ್ತಿರುವ ವಸಾಹತುಶಾಹಿ ಸಂಸ್ಕೃತಿ ಮತ್ತು ದೇಶೀಯ ಸಂಸ್ಕೃತಿಗಳ ಅನುಸಂಧಾನದ ಬಗೆಗೆ ಚಿಂತಿಸುವಾಗ ಸರಳ ಸಮೀಕರಣವಾಗುವ ಅಪಾಯವೊಂದು ನಮ್ಮ ಮುಂದಿದೆ. ಈ ಸಮೀಕರಣದ ನಿಲುವಿನ ಪ್ರಕಾರ ನಮ್ಮ ಆಧುನಿಕ ಚಿಂತನಾಕ್ರಮದ ಮೇಲೆ ವಸಾಹತುಶಾಹಿ ಸಂಸ್ಕೃತಿಯೊಂದು ಬೇರುಬಿಟ್ಟಿದೆ. ಈ ಸಮೀಕರಣದಲ್ಲಿ ವಸಾಹತುಶಾಹಿ ಸಂಸ್ಕೃತಿ ಮತ್ತು ದೇಶೀಯ ಸಂಸ್ಕೃತಿಗಳು ಬೇರೆ ಬೇರೆ ನೆಲೆಗಳನ್ನು ಒಳಗೊಂಡಿವೆ. ಹೀಗೆ ಭಾವಿಸಿಕೊಂಡರೆ ರಾಜಕೀಯ, ಸಾಮಾಜಿಕ ಪರಿಭಾಷೆಗಳು ಅಲ್ಲಿ ಇಲ್ಲವಾಗಿ ಸಮೀಕರಣದ ಪರಿಭಾಷೆಗಳು ಉದ್ಭವವಾಗುತ್ತವೆ. ಈ ಸರಳ ಸಮೀಕರಣಗಳಿಗೆ ಕೆಲವು ಸಂಗತಿಗಳು ಮಹತ್ವದ್ದೆಂದು ಅನ್ನಿಸುವುದಿಲ್ಲ. ಇದನ್ನು ಮುಂದುವರಿಸಬೇಕೆಂದರೆ, ವಸಾಹತುಶಾಹಿ ಮತ್ತು ದೇಶೀಯ ಅನ್ನುವುದು ಕೇವಲ ಭೂಗೋಲದ ವ್ಯಾಪ್ತಿಯೊಳಗಡೆಗೆ ತರುವಂತಿಲ್ಲ. ವಸಾಹತುಶಾಹಿ ಮತ್ತು ದೇಶೀಯ ಸಂಗತಿಗಳು ಸಂಸ್ಕೃತಿ, ರಾಜಕಾರಣ, ಮಾನಸಿಕ ವ್ಯಾಪಾರ ಇತ್ಯಾದಿಗಳಿಗೂ ಸಂಬಂಧ ಇಟ್ಟುಕೊಂಡಿದೆ. ಅದಕ್ಕಾಗಿಯೇ ಇದನ್ನು ಒಂದು 'ಬಿಕ್ಕಟ್ಟು' ಎಂದು ಕರೆದಿರುವುದು. ಇವುಗಳ ನಡುವೆ 'ಬಹುಮುಖಿ ಸಂವಾದ'ಗಳು ಇರುತ್ತವೆ. ಇದನ್ನು ರಾಜಕಾರಣದಿಂದ ಪ್ರಾರಂಭಿಸಿದರೆ ದಿನದಿನದ ಆಲೋಚನಾ ಕ್ರಮಕ್ಕೂ ಇದಕ್ಕೂ ಸಂಬಂಧ ಇರುತ್ತದೆ. ಈ ಅರ್ಥದಲ್ಲಿ 'ಪೂರ್ಣದೇಸಿ', 'ಪೂರ್ಣ ವಸಾಹತು' ಅಥವಾ 'ಪೂರ್ಣ ವಸಾಹತೋತ್ತರ' ಎಂದು ಕರೆಯುವುದು ತುಂಬಾ ತ್ರಾಸದ ಸಂಗತಿ. ಈ ಮಾತನ್ನು ಹೇಳುವಾಗಲೂ ಒಂದು ಚಾರಿತ್ರಿಕ ಪ್ರಕ್ರಿಯೆಯನ್ನು ಅಲ್ಲಗಳೆಯಲಾಗದು. ಈಗಿನ ಒಂದು ಕವಲಿನ

ನಂಬಿಕೆಯ ಪ್ರಕಾರ, ಸಂಸ್ಕೃತಿ ಬಗೆಗಿನ ತಿಳುವಳಿಕೆಯು ಅಷ್ಟು ಸುಲಭವಲ್ಲ. ಸಾಂಸ್ಕೃತಿಕ ಚಟುವಟಿಕೆಯೆಂದರೆ ಅದು ಮನುಷ್ಯನು ನಡೆಯುವ ಕ್ರಮದಿಂದ ಪ್ರಾರಂಭಿಸಿ, ಸಾಹಿತ್ಯ, ಕಲೆ, ವಾಸ್ತುಶಿಲ್ಪದ ಕ್ರಮದ ತನಕ ಮುಂದುವರಿಯುತ್ತದೆ. ಹೀಗಾಗಿ ಸಂಸ್ಕೃತಿಯ ವ್ಯಾಖ್ಯಾನಕ್ಕೆ ಚಾರಿತ್ರಿಕ ವ್ಯಾಖ್ಯಾನ ಇರುವ ಹಾಗೆ, ಅದಕ್ಕೆ ಹುಟ್ಟು – ಸಾವಿನ ಅರ್ಥವೂ ದೊರೆಯಬಹುದು. ಚಿಕ್ಕಣ್ಣರ "ನಶಬುದೆಡೆಗೆ" ಕೃತಿಯು ತುಂಬಾ ಮಹತ್ವದ ವಿವರಗಳನ್ನು ನಮಗೆ ನೀಡುತ್ತದೆ.

ಆಧುನಿಕ ಭಾರತೀಯ ಸ್ಥಿತ್ಯಂತರವನ್ನು ನಾವು ಆಳಿದ ಮತ್ತು ಆಳಿಸಿಕೊಂಡ ಸಂಸ್ಕೃತಿಯ ನಡುವಣ ಸಂಬಂಧದ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸುತ್ತಿರುವುದು ಸರಿಯಷ್ಟೇ? ವಸಾಹತು ಸನ್ನಿವೇಶದಲ್ಲಿ ಆಳಿದ ದೇಶವನ್ನು ಅಭಿವೃದ್ಧಿ ಹೊಂದಿದ ದೇಶವೆಂದು ಕರೆಯುವುದು ಕೂಡಾ ಇಲ್ಲಿ ಗಮನಾರ್ಹ. ಆಳಿದ ದೇಶದ ಪ್ರಕ್ರಿಯೆಗಳು ಸಹಜವಾಗಿಯೇ ಆಳಿಸಿಕೊಂಡ ದೇಶದ ಮೇಲೆ ಕ್ರಿಯಾತ್ಮಕವಾದ ಪರಿಣಾಮವನ್ನು ಬೀರುತ್ತವೆ. ಇಲ್ಲಿ ಪ್ರಭುತ್ವದ ಅಂಶಗಳು ಕೆಲವು ಸಂಗತಿಗಳನ್ನು ಒಳಗೊಂಡಿರುತ್ತದೆ. ಪ್ರಭುತ್ವಕ್ಕೆ ಅದರದ್ದೇ ಆದ ಹಿತಾಸಕ್ತಿ ಮುಖ್ಯ. ಆಳುವ ಸಂಸ್ಕೃತಿ ಮತ್ತು ಆಳಿಸಿಕೊಳ್ಳುವ ಸಂಸ್ಕೃತಿಗಳ ನಡುವೆ ದ್ವಂದ್ವಾತ್ಮಕವಾದ ಸಂಬಂಧವಿರುತ್ತದೆ. ಇದರೊಂದಿಗೆ ಪ್ರಭುತ್ವವು ತನ್ನ ಸಾಂಸ್ಕೃತಿಕ ಅಂಶಗಳನ್ನು ಮೌಲ್ಯಗಳನ್ನು ಆಳಿಸಿಕೊಳ್ಳುವುದರ ಮೇಲೆ ಹೇರುವಾಗಲೇ ಅತ್ಯಂತ ಸಂಕೀರ್ಣತೆಯು ಇರುತ್ತದೆ. ಒಂದು ಸಂಸ್ಕೃತಿಯು ಬೇರೊಂದು ಸಂಸ್ಕೃತಿಯ ಒಳಗಡೆ ಪ್ರವೇಶಿಸಿದಾಗ ಸಾಂಸ್ಕೃತಿಕ ವಿದ್ಯುತ್ಸಂಚಾರ ಉಂಟಾಗುತ್ತವೆ. ಸಾಂಸ್ಕೃತಿಕ ವಿದ್ಯುತ್ ಸಂಚಾರವು ಬೇರೆ ಬೇರೆ ರಹದಾರಿಗಳನ್ನು ತೆರೆಯುತ್ತದೆ. ಇದು ಬಹುಮುಖಿ ಸಂವಾದಕ್ಕೆ ಎರವಾದ ಪ್ರಕ್ರಿಯೆಯೂ ಹೌದು.

ಪ್ರಧಾನ ಸಂಸ್ಕೃತಿಯನ್ನು ಅಧೀನ ಸಂಸ್ಕೃತಿಯು ಅನುಸರಿಸುತ್ತದೆ ಎಂಬ ವಾದವು ಈಗಾಗಲೆ ಬಂದಿದೆಯಷ್ಟೆ? ಈ ವಾದವನ್ನು ಬೆಳೆಸಲು ಬಳಸಿಕೊಂಡಿರುವ "ಸಂಸ್ಕೃತೀಕರಣ", "ಪಾಶ್ಚಾತ್ಯೀಕರಣ"ದ ಪರಿಭಾಷೆಗಳು ಅಧೀನ ಸಂಸ್ಕೃತಿಗಳ ಮುಖಪರಿಚಯವನ್ನು ಸರಿಯಾಗಿ ಮಾಡಿಕೊಂಡಿಲ್ಲವೆಂದು ಕಾಣುತ್ತದೆ. ಅಧೀನ ಸಂಸ್ಕೃತಿಯು ತನ್ನ ಅನನ್ಯತೆಯನ್ನು ಕಾಪಾಡಿಕೊಳ್ಳಲು ಕೇವಲ ಆಂತರಿಕ ಶಕ್ತಿಯನ್ನು ಬಳಸಿಕೊಂಡಾಗ ಅದು ತನ್ನ ವಿನ್ಯಾಸಗಳನ್ನು ಬೇರೆ ರೀತಿಯಲ್ಲಿ ಸ್ಥಾಪಿಸಿಕೊಳ್ಳುತ್ತದೆ. ಹಾಗೆಯೇ ಬಹುಮುಖಿ ಶಕ್ತಿಯನ್ನು ಬಳಸಿಕೊಂಡಾಗ ಅದು ಗ್ರಹಿಸಿಕೊಳ್ಳುವ ಪ್ರಕ್ರಿಯೆಗಳು ವಿನಯದ ಮುಖಾಂತರ ಹೊಸ ಅರ್ಥವನ್ನು ಪಡೆದುಕೊಳ್ಳುತ್ತದೆ. ಅಧೀನ ಸಂಸ್ಕೃತಿಯು ತಾನು ಪಡೆದುಕೊಳ್ಳುವ ಚಹರೆಗಳನ್ನು ಆಂತರಿಕ ಶಕ್ತಿಗೆ ತಿರುಗಿಸಿದಾಗ ಅದು ರಾಜಕೀಯ ಪರಿಭಾಷೆಯನ್ನು ಹೊರತುಪಡಿಸಿ ಮಾತನಾಡಲು ಶುರು ಮಾಡುತ್ತದೆ. ಅಲ್ಲಿ ದೈನಂದಿನ ಉಸಿರು ಮುಖ್ಯ. ಈ ರೀತಿಯ ಒಳ ವಿದ್ರೋಹಗಳಿಗಾಗಿ ಮಾಡಿಕೊಳ್ಳುವ ಆಯ್ಕೆಯು ಹಾಡಿನ ರೂಪದಿಂದ ತೊಡಗಿ ಖಾದಿಬಟ್ಟೆಯ ತನಕ ಮುಂದುವರೆಯುತ್ತದೆ. ಆದರೆ ಬಹಿರ್ಮುಖ ವ್ಯಾಪಾರವು ಈ ತರಹದ್ದಲ್ಲ. ಬಹಿರ್ಮುಖ ವ್ಯಾಪಾರಕ್ಕೆ ಮುಖ್ಯವಾಗಿ

ರಾಜಕೀಯ ಪರಿಭಾಷೆಗಳ ಸಾಮಗ್ರಿಗಳೇ ಬೇಕು. ಆದರೆ ಅಂತಿಮವಾಗಿ ಎರಡೂ ಜೀವನ ಕ್ರಮದ ಮೊತ್ತವೇ ಆಗಿರುತ್ತದೆ. ಮಾರ್ಕ್ಸ್‌ವಾದಿಗಳು ಇದೇ ಅರ್ಥದಿಂದ ಚರ್ಚಿಸಿದರು. ಸಂಸ್ಕೃತಿಯ ಒಳಗಡೆ ಇರುವವರು ಎಲ್ಲಾ ಹತಾಶೆಯನ್ನು ಅನುಭೋಗಿಸುತ್ತಿದ್ದು ಪ್ರಧಾನ ಸಂಸ್ಕೃತಿಯ ವಿರುದ್ಧ ಸೆಟೆದು ನಿಲ್ಲುವಾಗ ಬೇರೆ ಪರ್ಯಾಪ್ತ ಸಂಗತಿಗಳನ್ನು ಅನ್ವಯಿಸಿಕೊಳ್ಳಲು ಅನುವಾಗುತ್ತಾರೆ. ಆದರೆ ಪಶ್ಚಿಮ ಯೂರೋಪಿನ ಮುಖ್ಯ ಪರಿಭಾಷೆಯ ಪ್ರಕಾರ ಪ್ರಧಾನ ಸಂಸ್ಕೃತಿ ಮತ್ತು ಅಧೀನ ಸಂಸ್ಕೃತಿ ಎರಡು ಭಿನ್ನ ಧ್ರುವಗಳು (**Daniel J. Borison** 1958, ಪು. 393). ಆದರೆ ಈ ವಿಭಾಗೀಕರಣವು ಕೂಡಾ ನಾವು ಕಲಿತುಕೊಂಡ ಪರಿಭಾಷೆ. ಸಂಸ್ಕೃತಿಯ ಕುರಿತು ಬರೆಯುವಾಗ ಚಿಕ್ಕಣ್ಣನವರದು ಆಯ್ಕೆ ಮಾಡಿಕೊಳ್ಳುವ ವೈಚಾರಿಕ ಚೌಕಟ್ಟು ಕೂಡ ಒಂದು ಅರ್ಥದಲ್ಲಿ ಆರೋಗ್ಯಕರ ಸಂಸ್ಕೃತಿಯ ಪರವಾಗಿರುವಂಥದ್ದು. ಆಧುನಿಕ ಕನ್ನಡ ಸಾಹಿತ್ಯದ ಸಾಂಸ್ಕೃತಿಕ ಬೆಳವಣಿಗೆಯ ಸಂದರ್ಭದಲ್ಲಿ ನಾವು ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ವಸ್ತುನಿಷ್ಠ ಸಂಸ್ಕೃತಿ ಮತ್ತು ವಿಷಯನಿಷ್ಠ ಸಂಸ್ಕೃತಿಗಳ ನಡುವಣ ಸಂಘರ್ಷ. ವಸ್ತುನಿಷ್ಠ ಸಂಸ್ಕೃತಿ ಬೆಳೆಯುತ್ತಾ ಬಂದಂತೆ ವೈಯಕ್ತಿಕ ವಿಕಾಸದ ಪರಿಕಲ್ಪನೆಗಳು ಬೆಳೆಯುತ್ತವೆ. ಈ ವಸ್ತುನಿಷ್ಠ ಮತ್ತು ವಿಷಯನಿಷ್ಠ ಸಂಸ್ಕೃತಿಯ ಸ್ವರೂಪವು ಕೆಲಸದ ವಿಭಾಗೀಕರಣದ ಪರಿಕಲ್ಪನೆಗಳನ್ನು ರೂಢಿಸುತ್ತದೆ. ಸಿಮ್ಮೆಲ್ ಇದನ್ನು ಆಧುನಕ ಸಂಸ್ಕೃತಿಯ 'ದುರಂತ ನಾಟಕ' ವೆಂದು ಕರೆದಿರುವುದು ಗಮನಾರ್ಹ. ಮಾರ್ಗ ಮತ್ತು ದೇಸೀಯ ಪರಿಕಲ್ಪನೆಗಳು ಈ ವಿಭಜನೆಯ ಮುಖಾಂತರ ನಡೆದು ಬರುವಾಗ ಸಮಸ್ಯೆ ಇದೆ. ವಸ್ತುನಷ್ಠ ಸಂಸ್ಕೃತಿಯು ಆಧುನಿಕ ತಂತ್ರಜ್ಞಾನಗಳ ಪ್ರಣಾಳಿಕೆಯನ್ನು ಹೊಂದಿರುತ್ತದೆ. ಆದರೆ ವಿಷಯನಿಷ್ಠ ಸಂಸ್ಕೃತಿಯು ಆ ರೀತಿಯದ್ದಲ್ಲ. ನಾವಿಲ್ಲಿ ಪ್ರಧಾನ ಸಂಸ್ಕೃತಿ ಎನ್ನುವುದನ್ನು ವಸ್ತು ನಿಷ್ಠ ಸಂಸ್ಕೃತಿಗೆ ಪೂರಕವಾಗಿ ಯೋಚಿಸಲು ತೊಡಗಿದರೆ ದೇಸೀ ಸಂಸ್ಕೃತಿಯು ಜನಸಮೂಹದ ಪದನುಡಿಯನ್ನು ಒಳಗೊಂಡಿದೆ ಎಂದು ತರ್ಕಿಸಬಹುದು. 'ಬಕ್ತಿನ್' ದೇಸೀ ಸಂಸ್ಕೃತಿಯ ಕುರಿತು ಮಾತನಾಡುವಾಗ ಅದು ಅನಧಿಕೃತವಾದ ರೂಪಗಳನ್ನು ಧರಿಸುತ್ತದೆ. ಅಭಿವ್ಯಕ್ತಿಯಲ್ಲಿ ಅದು ಪ್ರೇಕ್ಷಕರನ್ನು ಬಳಸಿಕೊಳ್ಳುತ್ತದೆ. ಅದಕ್ಕೆ ಕ್ರಿಯಾತ್ಮಕವಾದ ಅಂಶವೊಂದಿದೆ ಎಂದು ಹೇಳುತ್ತಾನೆ (**Bakhtin**, 1968, ಪು. 72). ಚಿಕ್ಕಣ್ಣನವರ ಕತೆಯ ಮಾದರಿಗಳಿವು. ದೇಸೀ ಸಂಸ್ಕೃತಿಯು ಈ ಕಾರಣಗಳಿಂದ ಜನಪ್ರಿಯ ಉತ್ಸವಮೂರ್ತಿಯ ಪ್ರತಿಮೆಗಳನ್ನು ಪಡೆದುಕೊಳ್ಳುತ್ತದೆ. ದೇಸೀ ಎಂಬುದಕ್ಕೆ ಅಧಿಕೃತ ದಾಖಲೆಗಳೇನೂ ಇಲ್ಲ. ಮತ್ತೊಂದು ಸಮಸ್ಯೆಯ ಕಡೆಗೆ ಇಲ್ಲಿ ಗಮನಹರಿಸಬಹುದು. ಅದು ಸಾಹಿತ್ಯಪರಿಕಲ್ಪನೆಯ ಬಗೆಗೆ ಸಂಬಂಧಪಟ್ಟ ವಿಷಯ, ಸಾಹಿತ್ಯದಲ್ಲಿ ಅರ್ಥವು ಪ್ರಧಾನವಾದರೆ ಅದರ ಧ್ವನಿ ಮತ್ತು ಲಯವು ಅದಕ್ಕೆ ಅಧೀನವಾಗುತ್ತದೆ. ಕಾವ್ಯದ ಧ್ವನಿ ಶಕ್ತಿ ಮತ್ತು ಅದರ ಲಯ ವಿನ್ಯಾಸಗಳನ್ನು ಅಧೀನ ಸಂಸ್ಕೃತಿಯ ಲಕ್ಷಣವೆಂದು ಪರಿಗಣಿಸಿದರೆ ಅದು ಹೊರಡಿಸುವ ಅರ್ಥಶಕ್ತಿಯೂ ಬೇರೆ ನೆಲೆಗಳಿಗೆ ನಮ್ಮನ್ನು ಕೊಂಡೊಯ್ಯಬಹುದು. ಹೀಗಾಗಿ ನಾವು ಗ್ರಹಿಸಿಕೊಳ್ಳುವ ವಿಧಾನಗಳು ಈ ಕಾರಣಗಳಿಂದ ಭಿನ್ನ ಭಿನ್ನ ಅಂಶಗಳನ್ನು ಒಳಗೊಂಡಿರುತ್ತವೆ.

ವೈದಿಕ= ಮಾರ್ಗ = ಯಜಮಾನ = ಆಳುವ ಸಂಸ್ಕೃತಿ ಇದರ ಪರವಾಗಿರುವುದುಪ್ರಗತಿ ವಿರೋಧ

ಅವೈದಿಕ = ದೇಸೀ = ಪರ್ಯಾಯ = ಪ್ರತಿ ಸಂಸ್ಕೃತಿ ಇದರ ಪರವಾಗಿರುವುದು ಪ್ರಗತಿಪರ

ಮತ್ತು ಇವೆರಡೂ ಭಿನ್ನ ಭಿನ್ನವಾದ ಪರಂಪರೆಗಳು. ಒಂದಕ್ಕೊಂದು ಸಂಬಂಧವಿಲ್ಲದವು. ಈ ವೈಚಾರಿಕ ಪ್ರಣಾಲಿಯ ಮತ್ತೊಂದು ರೂಪವು ತಾರ್ಕಿಕವಾಗಿ ಕನ್ನಡದಲ್ಲಿ ಹೀಗೆ ಮುಂದುವರಿದಿದೆ :

ವೈದಿಕ ಪರಂಪರೆಯ ವಿರೋಧವೆಂದರೆ – ಇಂಗ್ಲಿಷ್ ಪ್ರಭುತ್ವವನ್ನು ಒಪ್ಪಿಕೊಳ್ಳುವುದು ಮತ್ತು ಅದರ ಪರವಾಗಿರುವುದು. ಇಂಗ್ಲೀಷೆನ್ನುವುದು ಬಿಡುಗಡೆಯ ಹಾದಿ ಹಾಗೂ ವೈದಿಕ ಪರಂಪರೆಯೆಂದರೆ ಅದು ಸೆರೆಮನೆ. ಮೇಲು ನೋಟಕ್ಕೆ ಇದು ಸರಿಯಾದ ವಿಚಾರಧಾರೆಯಂತೆ ಕಂಡರೂ ಅಂತರಾಳದಲ್ಲಿ ಈ ವೈಚಾರಿಕತೆಯು ತೆಳುವಾದ ತಾತ್ವಿಕತೆಯ ಹಿನ್ನೆಲೆಯನ್ನು ಒಳಗೊಂಡಿದೆ. ವೈದಿಕ ಮತ್ತು ಅವೈದಿಕ; ಆಳುವ ಮತ್ತು ಆಳಿಸಿಕೊಳ್ಳುವ ಸಂಸ್ಕೃತಿಯ ಪರಿಕಲ್ಪನೆಗಳು ಸಾಮಾಜಿಕ, ಆರ್ಥಿಕ ಮತ್ತು ಭೂಮಿಯ ಯಜಮಾನಿಕೆಯ ಪ್ರಶ್ನೆಯನ್ನು ಒಳಗೊಂಡಿಲ್ಲ. ಭೂಮಿಯ ಸಂಪನ್ಮೂಲ ಮತ್ತು ಜಾತಿಯ ನಡುವಣ ಸಂಬಂಧಗಳು ವಸಾಹತುಶಾಹಿ ಕಾಲಘಟ್ಟದಲ್ಲಿ ಒಂದು ಸಂಕೀರ್ಣವಾದ ಅವಸ್ಥೆಯನ್ನು ತಲುಪಿತ್ತು. ಭೂಮಿಯನ್ನು ಅಳೆಯುವ ಪದ್ಧತಿ ಮತ್ತು ಭೂ ಕಂದಾಯ ಪದ್ಧತಿಯ ನವೀಕರಣವನ್ನು ಬ್ರಿಟಿಷರು ಕೈಗೊಂಡದ್ದು ಒಂದು ಉದಾಹರಣೆ ಮಾತ್ರ. ಭೂಮಿಯ ನಕ್ಷೆಯನ್ನು ಬ್ರಿಟಿಷ್ ಮಾಪನಕ್ಕೆ ಅನುಸಾರವಾಗಿಯೇ ಮಾಡಲಾಗುತ್ತಿತ್ತು ಎನ್ನುವುದಕ್ಕೆ ಈಗಲೂ ಕಂದಾಯ ಇಲಾಖೆಗಳು ಕೈಗೊಳ್ಳುವ ಮಾನದಂಡಗಳು ಸಾಕ್ಷಿಯಾಗಿವೆ. ವಾಸ್ತವ ಸತ್ಯವೆಂದರೆ ಒಂದೊಂದು ಪ್ರದೇಶದಲ್ಲಿ ಒಂದೊಂದು ರೀತಿಯ ಯಜಮಾನಿಕೆಯಿರುವುದು ಮತ್ತು ಯಜಮಾನಿಕೆಯು ಒಂದೊಂದು ಸಂದರ್ಭದಲ್ಲಿ ಒಂದೊಂದು ಮಾದರಿಯಲ್ಲಿರುವುದು. ಚಿಕ್ಕಣ್ಣನವರ ಕತೆಗಳಲ್ಲಿ ಈ ಅಂಶಗಳು ಎದ್ದು ಕಾಣಿಸುತ್ತವೆ. ಭೂಹೀನರು, ಸಣ್ಣಪುಟ್ಟ ಬೇರೆ ಬೇರೆ ಕೆಲಸದವರು, ಅವಿದ್ಯಾವಂತರು, ನಿರ್ಮಲ ಮನಸ್ಸಿನವರು, ಸಂಕೀರ್ಣ ಸಮಸ್ಯೆ ಬಂದಾಗ ಅದಕ್ಕಾಗಿ ಸಂಕಟ ಪಡುವವರು ಚಿಕ್ಕಣ್ಣವರ ಕತೆಗಳ ಪ್ರಮುಖ ಪಾತ್ರಗಳಾಗಿದ್ದಾರೆ.

ಕನ್ನಡದಲ್ಲಿ ಆಧುನಿಕ ಸಾಹಿತ್ಯವು ಹುಟ್ಟಿಕೊಂಡಿರುವುದೇ ಒಂದು ಚಾರಿತ್ರಿಕ ಸಂಕಟದಲ್ಲಿ. ಈ ಚಾರಿತ್ರಿಕ ಸಂಕಟವು ಒಂದೇ ಮಾತಿನಲ್ಲಿ ಹೇಳಬಹುದಾದರೆ ವಸಾಹತುಶಾಹಿ ಸಂಸ್ಕೃತಿಯ ಕೊಡುಗೆಯಾಗಿದೆ. ವಸಾಹತುಶಾಹಿ ಅನುಭವದಿಂದ ಬಿಡುಗಡೆ ಪಡೆಯಲು ವಸಾಹತು ಸಂಸ್ಕೃತಿಗಳು ದೇಶೀವಾದದ ನಿಲುವುಗಳನ್ನು ಸಮರ್ಥಿಸುತ್ತವೆ. ಆದರೆ ಭಾರತದ ಸಂದರ್ಭದಲ್ಲಿ ದೇಶೀವಾದದ ಮುಖ್ಯ ಅಭಿವ್ಯಕ್ತಿಯಾದ ಸಾಂಸ್ಕೃತಿಕ ಪುನರುಜ್ಜೀವನ ಎಲ್ಲಾ ಪ್ರಾದೇಶಿಕ ಸಂಸ್ಕೃತಿಗಳಲ್ಲಿ ಒಂದೇ ಬಗೆಯದ್ದಾಗಿರಲಿಲ್ಲ.

ರಾಷ್ಟ್ರೀಯ ಸಂಸ್ಕೃತಿ ಬಗ್ಗೆ ಭಾವುಕವಾದ ಮನೋಭಾವನೆ ಪಶ್ಚಿಮದ ಮಾನವತಾವಾದಿ ಧೋರಣೆಗಳ ಪ್ರಭಾವದಿಂದಾಗಿ ಉಂಟಾದ ಸಮಾಜಸುಧಾರಕ ಪ್ರವೃತ್ತಿ, ಆದರ್ಶವಾದ ಇವುಗಳು ವಸಾಹತುಶಾಹಿ ಅನುಭವದ ಎದುರಿನಲ್ಲಿ ಭಾರತೀಯ ಮನಸ್ಸು ಸೃಷ್ಟಿಸಿಕೊಂಡ ಸ್ಥೂಲವಾದ ಒಲವುಗಳಾದ್ದರಿಂದ ಅವುಗಳ ಪ್ರಭಾವವನ್ನು ಕನ್ನಡದಂತಹ ಪ್ರಾದೇಶಿಕ ಸಂಸ್ಕೃತಿಗಳ ಮೇಲೂ ಕಾಣುತ್ತೇವೆ (ರಾಜೇಂದ್ರ ಚೆನ್ನಿ, ದೇಶೀವಾದ, 1989, ಪು. 47).

ಚಿಕ್ಕಣ್ಣವರ "ಮುಂಜಾವು" ಕಾದಂಬರಿಯ ಬಗ್ಗೆ ಡಿ.ಆರ್. ನಾಗರಾಜ್ ಹೀಗೆ ಹೇಳುತ್ತಾರೆ : ಕಥೆಯ ಹಂದರದ ದೃಷ್ಟಿಯಿಂದ ಇದು ನವ್ಯೋತ್ತರದ ಸಾಮಾನ್ಯ ವಸ್ತು. ಕಸ್ತೂರಿ ಎನ್ನುವ ಬಡ ಕುಂಬಾರನೊಬ್ಬ ಗ್ರಾಮ ಸಮಾಜದ ಪ್ರತಿಷ್ಠಿತರ ಜತೆಯಲ್ಲಿ ನುಗ್ಗಾಡಿ ಬದುಕಿದ ಕಥೆ. ಅವನ ಮಗ ತಿಮ್ಮಾಜಿ, ಹೊಸ ಜನಾಂಗದ ವ್ಯಕ್ತಿಯಾಗಿ ಕೋಪಗೊಂಡು ಕನಲಿದ ಕಥೆ ಇದು. ಹಿಂದಿನ ತಲೆಮಾರಿನ ಸಾಹಿತ್ಯಕ್ಕೆ ಬಡವರಲ್ಲಿ ಕಸ್ತೂರಿ ಮಾತ್ರ ಗೊತ್ತಿತ್ತು. ಆತನ ತಾಳ್ಮೆ, ಜೀವನ ಪ್ರೀತಿ, ಮುಗ್ಧತೆ ಮಾತ್ರ ಗೊತ್ತಿತ್ತು. ಈ ತಲೆಮಾರಿನ ಸಾಹಿತ್ಯಕ್ಕೆ ತಿಮ್ಮಾಜಿಯ ಸಿಟ್ಟು, ದಂಗೆಯೇಳುವ ಧೈರ್ಯ ಮಾತ್ರ ಗೊತ್ತು. ಆದರೆ ಚಿಕ್ಕಣ್ಣ ಈ ಎರಡು ತಲೆಮಾರಿನ ಇಬ್ಬರು ವ್ಯಕ್ತಿಗಳ ಕಥೆ ಹೇಳುವಲ್ಲಿ ಅಪಾರ ಕಲಾತ್ಮಕ ಜಾಣತನ ತೋರಿದ್ದಾರೆ. ಎಲ್ಲಕ್ಕಿಂತ ಹೆಚ್ಚಾಗಿ ದಟ್ಟ ಮಾನವ ಪ್ರೀತಿಯಿಂದ ಕಥೆ ಹೇಳಿದ್ದಾರೆ. ಆದ್ದರಿಂದ ತಿಮ್ಮಾಜಿಯ ಬಗ್ಗೆ ಪ್ರೀತಿಯಿದ್ದೂ ಕಥೆ ಕಸ್ತೂರಿಯ ಕಡೆಗೇ ವಾಲಿದೆ (ಪು. iv). ಡಿ.ಆರ್. ನಾಗರಾಜರ ಈ ಮಾತುಗಳು ಚಿಕ್ಕಣ್ಣನವರ ಎಲ್ಲಾ ಬರಹಗಳಿಗೂ ಅನ್ವಯವಾಗುತ್ತದೆ. ಇಲ್ಲಿಯೇ ನಾವು ರಾಷ್ಟ್ರೀಯ ಚಳುವಳಿ ಮತ್ತು ಅದರ ಪರಿಣಾಮಗಳನ್ನು ಗಮನಿಸಬೇಕು.

ಸ್ವದೇಶಿ ಚಳುವಳಿಯ ಮೂಲ ಆರಾಧನೆ ಇರುವುದು ದೇಶೀಯ ಸಂಸ್ಕೃತಿಯ ಮೂಲದಲ್ಲೇ. ಸ್ವದೇಶೀ ಚಳುವಳಿಯು 1902 ಹೊತ್ತಿಗೆ ಧರ್ಮವನ್ನು ದೇಶೀಯ ಐಕ್ಯಕ್ಕೆ ಒಂದು ಮಾನದಂಡವಾಗಿ ಇಟ್ಟುಕೊಂಡಿತು. ಇದರ ಪರಿಣಾಮವಾಗಿ ಸ್ವದೇಶೀ ರಾಜಕಾರಣದಲ್ಲಿ ಧರ್ಮವೂ ಒಂದಂಶವಾಯಿತು. ಇದು ಏಕಾಂತವಾದಿಗಳ ಒಂದು ರಾಜಕೀಯ ಸಂವಾದವೂ ಹೌದು. 'ಸ್ವರಾಜ್ಯ', 'ಧರ್ಮರಾಜ್ಯ', 'ರಾಮರಾಜ್ಯ' ಮೊದಲಾದ ಪದಗಳು ಸ್ವದೇಶೀ ಚಳುವಳಿಯ ಮುಖ್ಯ ಆಕರ್ಷಕ ಪರಿಭಾಷೆಗಳು. ಜಾತಿಗೂ ಧರ್ಮಕ್ಕೂ ಸಂಬಂಧವೇ ಇಲ್ಲವೆಂದು ಗಾಂಧಿ ಭಾವಿಸಿದ್ದರು. ಹಾಗೆಯೇ ಅಹಿಂಸೆ ಮತ್ತು ಸತ್ಯಾಗ್ರಹ ಗಾಂಧಿಯ ಪ್ರಕಾರ ಒಂದು ಪ್ರಯೋಗ ಮಾತ್ರ. ಸತ್ಯಾಗ್ರಹಿಯು ಒಬ್ಬ ರಾಜಕೀಯ ನೇತಾರ. ಗಾಂಧಿಯ ಕಲ್ಪನೆಯ ಪ್ರಕಾರ ಸ್ವರಾಜ್ಯದ ಪರಿಕಲ್ಪನೆಯು ಜನ ಸಮುದಾಯದ ಪರಿಭಾಷೆಯೂ ಹೌದು.

ವಸಾಹತುಶಾಹಿ ಸಂಸ್ಕೃತಿ ಮತ್ತು ದೇಶೀಯ ಸಂಸ್ಕೃತಿಗಳ ಅನುಸಂಧಾನದಲ್ಲಿ ನಡುವೆ ಉದಾರವಾದಿ, ಮಾನವತಾವಾದವೂ ಸಹ ರೂಪ ತಳೆಯಿತು. ವಿಶ್ವಮಾನವ, ವಿಶ್ವ ಭ್ರಾತೃತ್ವ, ವಿಶ್ವ ಕಲ್ಪನೆ ಮೊದಲಾದ ಪರಿಭಾಷೆಗಳು ಕನ್ನಡದಲ್ಲಿ ಚಲಾವಣೆಗೆ ಬಂದಿರುವುದಕ್ಕೆ ಇದು ಕಾರಣವಾಗಿದೆ. ಈ ರೀತಿಯ ಮಾನವತಾವಾದದ ಕಲ್ಪನೆಯು

ಸ್ಥಳೀಯ ಸಂಸ್ಕೃತಿಯಿಂದ ವಿಶ್ವಸ್ಥ ಸಂಸ್ಕೃತಿಗಳೆಡೆಗೆ ಜಿಗಿಯುತ್ತದೆ. ಇದು ಸರಳ ಮತ್ತು ಸುಲಭವಾದ ಉಪಾಯ. ಯಾಕೆಂದರೆ ಪ್ರಾದೇಶಿಕ ಸಂಸ್ಕೃತಿಯಡಿಯಲ್ಲಿ ನಲುಗುತ್ತಿರುವ ಅನೇಕ ಸಮಸ್ಯೆಗಳ ಬಗೆಗೆ ಇದು ತಲೆಕೆಡಿಸದಂತೆ ಮಾಡಿಬಿಡುತ್ತದೆ. ಮೇಲಿನ ಮಾತುಗಳನ್ನು ಉದ್ದೇಶಪೂರ್ವಕವಾಗಿಯೇ ಬಳಸಿಕೊಂಡಿದ್ದೇನೆ. ಸ್ವದೇಶಿ ಚಳುವಳಿಯು ಹುಟ್ಟು ಹಾಕಿದ ಅನೇಕ ಪರಿಭಾಷೆಗಳು ಪ್ರಾಯೋಗಿಕವಾಗಿ ಎಷ್ಟರ ಮಟ್ಟಿಗೆ ಅನ್ವಯವಾಗಿದೆ ? ಇದು ಮುಖ್ಯ ಪ್ರಶ್ನೆ. ಎರಡು ಕಾದಂಬರಿಗಳನ್ನು ನಿರೂಪಿಸುವ ಕ್ರಮದಲ್ಲಿ ಚಿಕ್ಕಣ್ಣನವರಿಗೆ ಪ್ರಾದೇಶಿಕ ಕಲೆಗಳ ನಿರೂಪಣೆಯ ಕ್ರಮವೇ ಹೆಚ್ಚು ಇಷ್ಟವಾದಂತೆ ಕಾಣುತ್ತದೆ. ಕಥನ ಕ್ರಮದ ನಿರೂಪಣೆಯಲ್ಲಿ ಜನಪದ ಶೈಲಿಯ ಕಥನ ಕ್ರಮವು ಎದ್ದು ಕಾಣಿಸುತ್ತದೆ.

*"ಅಪ್ಪ ಚಲುವ ರಾಯ ಸೋಮಿ*
*ಹೊತ್ತು ಬರುತೀನಿ ನಿನ್ನ ಸೇವೆಗೆ*
*ಹೊತ್ತು ಬರುತೀನಿ ನಿನ್ನ ಸೇವೆಗೆ ಹರಕೇಯ*
*ಹಾಡು ಹೊಗಳುತೀನಿ ನಿನ್ನ ಹಿರಿಮೇಯಾ"*

(ಮುಂಜಾವು ಕಾದಂಬರಿಯ ಪ್ರಾರಂಭ)

*ಮಲ್ಲಯ್ಯ ಮಲಸೋಮಿ ಎಲ್ಲೀಗೆ ನಿನ ಪಯಣ*
*ಮಲ್ಲೀಗೆ ಬೆಳೆಯೋ ಹಾದಿಗುಂಟೆ*
*ಮಲ್ಲೀಗೆ ಬೆಳೆಯೋ ಹಾದಿ ಗುಂಟೆ ನಿನ ಪಯಣ*
*ಚೆಲ್ಲಿ ಬುಟವನೆ ಪರಸೆಯಾ ॥*

(ಕಾದಂಬರಿಯ ಕೊನೆಯ ಪದ).

'ದಂಡೆ'ಯಲ್ಲಿಯೂ ಅಷ್ಟೆ.

*ಶಿವನೆ ಎದುರು ತುಂಡುಗೋಡೆಯ*
*ತೆವಣಿಗೆಯ ಮೇಲಿಟ್ಟಿದ್ದ*
*ದೀಪದ ಬೆಳಕು*
*ತನ್ನ ಮೇಲೆ ಬೀಳುತ್ತಿತ್ತು*

(ದಂಡೆ ಕಾದಂಬರಿಯ ಪ್ರಾರಂಭ)

ಈ ರೀತಿಯ ನಿರೂಪಣೆಯ ಕ್ರಮವೇ ವಾಸ್ತವವಾಗಿ ಪ್ರಾದೇಶಿಕವಾಗಿರುವಂಥದ್ದು.

ಚಿಕ್ಕಣ್ಣರ ಬರಹಗಳಲ್ಲಿ ಎದ್ದು ಕಾಣುವ ಅಂಶವೆಂದರೆ ವ್ಯಕ್ತಿತ್ವ ವಿಕಾಸ ಹಾಗೂ ಮಾನವತಾವಾದ. ಅಲ್ಲೂಸರ್ ಹೇಳುವಂತೆ 18ನೇ ಶತಮಾನದ ಆಡಳಿತಾತ್ಮಕ ತಾತ್ವಿಕತೆಯಲ್ಲಿ ಮಾನವತಾವಾದವು ರೂಪು ತಳೆಯಿತು. ಇದು ಸ್ವಾತಂತ್ರ್ಯ ಸಮಾನತೆ ಮೊದಲಾದ ಪರಿಭಾಷೆಗಳನ್ನು ಚಲಾವಣೆಗೆ ತಂದಿತು. ಈ ಸಂದರ್ಭದ ಮಾನವತಾವಾದವು ವಿಶ್ವಾತ್ಮಕವಾದ ಮೌಲ್ಯಗಳನ್ನು ಒಪ್ಪಿಕೊಳ್ಳುವಂತೆ ಒತ್ತಾಯಿಸಿತು ಎಂದು ಹೇಳುತ್ತಾನೆ. ಕನ್ನಡ ನವೋದಯ ಸಂದರ್ಭದಲ್ಲಿ ಬಂದ ದೇಶೀಯ ಸಂಸ್ಕೃತಿಗಳ ನರೂಪಣೆಯು ಬಹುರೂಪತೆಯನ್ನು ನಿರಾಕರಿಸಿದವು. ನವ್ಯವು ವ್ಯಕ್ತಿ ಕೇಂದ್ರಿತ ಅನುಭವವೆಂದು ತಿಳಿಸಿತು.

ಯಾವಾಗಲೂ ಪ್ರಧಾನ ಸಂಸ್ಕೃತಿಯು ತನಗೆ ಬೇಕಾದ ಭಾಷೆಯನ್ನು ಸೃಷ್ಟಿಸುತ್ತದೆ. ಅದು ನಿರ್ದಿಷ್ಟ ಕ್ರಿಯಾತ್ಮಕ ಸ್ವರೂಪವನ್ನು ಒಳಗೊಂಡಿರುತ್ತದೆ. ಭಾರತೀಯ ಪರಿಸರದಲ್ಲೂ ಇದೇ ಸಂಗತಿಗಳು ಜರುಗಿದವು. 1835 ರಲ್ಲಿ ವಿಲಿಯಂ ಬೆಂಟಿಂಕ್‌ನ 'ಇಂಗ್ಲಿಷ್ ಎಜುಕೇಷನ್ ಆಕ್ಟ್' ಜಾರಿಗೆ ಬಂತು. ಆ ಸಂದರ್ಭದಲ್ಲಿಯೇ ತ್ರಿಭಾಷಾ ಸೂತ್ರವೂ ಶಿಕ್ಷಣ ಕ್ರಮಕ್ಕೆ ಅನ್ವಯವಾಯಿತು. ವಿಶೇಷವೆಂದರೆ ಸಂಸ್ಕೃತ ಕಾಲೇಜು ಮತ್ತು ಮದರಸಾಗಳಲ್ಲಿ ಇಂಗ್ಲಿಷ್ ಕಲಿಕೆ ಇರಲಿಲ್ಲ. ಈ ರೀತಿಯ ಸಂದರ್ಭದ ಒಳಗಡೆ ಕನ್ನಡ ನವೋದಯದ ಸಾಹಿತಿಗಳು ಕವಿತೆಯನ್ನು ಬರೆದರು. ನವ್ಯದ ಲೇಖಕರದ್ದು ವ್ಯಕ್ತಿ ನಿಷ್ಠ ಪರಂಪರೆ – ಚಿಕ್ಕಣ್ಣ ಇವೆರಡನ್ನೂ ನಿರಾಕರಿಸುತ್ತಾರೆ.

ವಸಾಹತುಶಾಹಿ ಸಂದರ್ಭದಲ್ಲಿ ಹೊಸದೊಂದು ವರ್ಗವು ಉದಯವಾಯಿತು. ಇದು ಸಾಂಪ್ರದಾಯಿಕ ಸಮಾಜದ ವಿದ್ಯಾವಂತ ವರ್ಗವಾಗಿರಲಿಲ್ಲ. ಈ ವಿದ್ಯಾವಂತ ವರ್ಗವು ಹಳೆಯ ಸಾಹಿತ್ಯ ಕೃತಿಗಳನ್ನು ಕೂಡಾ ಹೊಸ ರೀತಿಯಲ್ಲಿ ಓದಲು ತೊಡಗಿತು. ಎರಡನೆಯದಾಗಿ, ಓದುಗವರ್ಗದ ಅಭಿರುಚಿಯು ಬದಲಾದಾಗ ಆ ಖಾಲಿ ಜಾಗವನ್ನು ಕಾದಂಬರಿಗಳು ತುಂಬ ತೊಡಗಿದವು. ಓದುಗ ವರ್ಗಕ್ಕೆ ಹೊಸದು ಬೇಕಿತ್ತು. ಲೇಖಕರೂ ಹೊಸತನ್ನು ಕೊಟ್ಟರು. "ದಂಡೆ", "ಮುಂಜಾವು" ಕಾದಂಬರಿಗಳ ಸ್ವರೂಪವನ್ನು ಈ ಹಿನ್ನೆಲೆಯಲ್ಲಿ ಗಮನಸಬಹುದು.

ಹೀಗೆಂದಾಗ ಮತ್ತೊಂದು ಸಂಗತಿಯೂ ನಮಗಿಲ್ಲಿ ಪ್ರಸ್ತುತವಾಗುತ್ತದೆ. ಯುರೋಪಿಯನ್ ಸಂಸ್ಕೃತಿಯು ಭಾರತೀಯ ಬುಡಕಟ್ಟುಗಳ ಬಗೆಗೆ ನೋಡಿದ ಕ್ರಮಕ್ಕೂ ನವ್ಯೋತ್ತರ ಬರಹಗಾರರು ನೋಡಿದ ಕ್ರಮಕ್ಕೂ ಕೆಲವು ವ್ಯತ್ಯಾಸಗಳಿವೆ. ಈ ವ್ಯತ್ಯಾಸ ಬಂದಿರುವುದು ಸಾಂಸ್ಕೃತಿಕ ಚೌಕಟ್ಟು ನಿರ್ದೇಶಿಸುವ ಆಲೋಚನಾ ಕ್ರಮಕ್ಕೆ ಸಂಬಂಧಿಸಿದಂತೆ ಮಾತ್ರ. ಯುರೋಪ್ ಕೇಂದ್ರಿತ ಆಲೋಚನಾ ಕ್ರಮದಲ್ಲಿ ಭಾರತೀಯ ಸಂಸ್ಕೃತಿಯ ವ್ಯಾಖ್ಯಾನವು ಶುರುವಾಗುವುದು ಅಧ್ಯಯನದ ವಿಷಯವೆಂಬಂತೆ ಮಾತ್ರ. ಈ ದೃಷ್ಟಿಯಿಂದ ಭಾರತೀಯ ಸಾಮಾಜಿಕ ಸಂಸ್ಕೃತಿಗಳ ವಿಷಯವು ಯುರೋಪ್ ಕೇಂದ್ರಿತ ಚಿಂತಕರಿಗೆ ಒಂದು ರೀತಿಯಲ್ಲಿ ಪ್ರಯೋಗದಲ್ಲಿರುವ ವಸ್ತು ಮಾತ್ರ. ಯುರೋಪ್ ಕೇಂದ್ರಿತ ಚಿಂತಕರು ಭಾರತೀಯ ಬುಡಕಟ್ಟು ಸಂಸ್ಕೃತಿಗಳ ಬಗ್ಗೆ ಚಿಂತಿಸುವಾಗ ತೀರಾ ಅನಾಗರಿಕ ಜಗತ್ತನ್ನು ಬರಹಗಳಲ್ಲಿ ಅನಾವರಣ ಮಾಡುವ ಉತ್ಸಾಹದಲ್ಲಿರುತ್ತಾರೆ. ಯುರೋಪಿಯನ್ ಚಿಂತಕರ ಚರ್ಚೆ ಮುಖ್ಯವಾಗಿ ಪ್ರಮೇಯಕ್ಕೆ ಬೇಕಾದ ಸಾವಯವ ವಸ್ತುವನ್ನು ಭಾರತೀಯ ಸಂಸ್ಕೃತಿಗಳ ಬಿಂಬದಿಂದ ಆಯ್ದುಕೊಳ್ಳುವಲ್ಲಿದೆ. ಈ ರೀತಿಯ ಚರ್ಚೆಯ ಅಂತಿಮ ತೀರ್ಪು ಇರುವುದು ಭಾರತೀಯ ಸಮಾಜದ ಮೇಲೆ ರಾಜಕಾರಣದ ಹಿಡಿತವನ್ನು ಸ್ಥಾಪಿಸುವುದು ಮಾತ್ರ. ಈ ದೃಷ್ಟಿಯಿಂದ ಯುರೋಪ್ ಕೇಂದ್ರಿತ ವ್ಯಾಖ್ಯಾನಗಳು ಸಂಸ್ಕೃತಿಯ ವ್ಯಾಖ್ಯಾನಗಳನ್ನು ತಮ್ಮ ನೆಲೆಗೆ ಅನುಸಾರವಾಗಿಯೇ ಮಾಡುತ್ತಾ ಬಂದಿವೆ. ಈ ಸಂದರ್ಭದಲ್ಲಿ ಭಾರತೀಯ ಸಮಾಜದ ಸುಧಾರಣೆಯ ಪ್ರಣಾಳಿಕೆ ಕೂಡಾ ಬ್ರಿಟಿಷ್ ಕಂಪೆನಿಗಳ ಉದ್ಘೋಷಣೆಗಳಲ್ಲಿ ಒಂದಾಯಿತು. ಈ ಸುಧಾರಣಾವಾದಿ

ನಲವು ಯಾರಿಗೆ ಪೂರಕವಾಯಿತು? ಭಾರತೀಯ ಪಶ್ಚಿಮ ಕೇಂದ್ರಿತ ರಾಜಕೀಯ ಚಿಂತಕರು ಕೂಡಾ ಈ ಸುಧಾರಣಾವಾದಿ ನಿಲುವನ್ನು ಅಂಗೀಕರಿಸಿದರು. ರಾಜಾರಾಂ ಮೋಹನ್‌ರಾಯ್ ಅವರೊಬ್ಬರ ಉದಾಹರಣೆಯು ಈ ವಿಷಯದ ಪ್ರಸ್ತಾವನೆಗೆ ಆಧಾರವಾಗುತ್ತದೆ. ಪಶ್ಚಿಮದ ಆಲೋಚನಾ ಕ್ರಮದ ಚೌಕಟ್ಟಿನಲ್ಲಿ ಭಾರತೀಯ ಸಂಸ್ಕೃತಿಗಳ ಸಮತಲವನ್ನು ಯೋಚಿಸುವ ಈ ಕ್ರಮದಿಂದ ಒಳ್ಳೆಯದೂ, ಕೆಡುಕೂ ಎರಡೂ ಆಯಿತು. ಆ ಪ್ರಶ್ನೆ ಬೇರೆ. ಎಷ್ಟು ಶೇಕಡಾ ಭಾರತೀಯ ಸಂಸ್ಕೃತಿಗೆ ಲಾಭವಾಯಿತು, ಎಷ್ಟು ಶೇಕಡಾ ನಷ್ಟವಾಯಿತು ಎಂದು ಲೆಕ್ಕಾಚಾರ ಹಾಕುವ ಲೇವಾದೇವಿ ವ್ಯವಹಾರವಿದಲ್ಲ. ಈ ರೀತಿಯ ಚರ್ಚೆಯ ಹಿಂದಿರುವ ಮುಖ್ಯ ಗುರಿಯಿದ್ದುದು ಬಂಡವಾಳಶಾಹಿ ವ್ಯವಸ್ಥೆಗೆ ಭಾರತೀಯ ಸಂಸ್ಕೃತಿಯು ಸಮತಲವಾಗಿರಬೇಕೆಂದು ಮಾತ್ರ. ರಾಟೆಯ ಬದಲಿಗೆ ಗಿರಣಿ ಯಂತ್ರ ಬರುವುದು ಸರಿ. ಆದರೆ ಹತ್ತಿಯ ಗಿರಣಿಯು ಇಲ್ಲಿಯ ಆರ್ಥಿಕ ವ್ಯವಹಾರವನ್ನೇ ಬುಡಮೇಲು ಮಾಡಿದರೆ? ಈ ರೀತಿಯ ಛಿದ್ರೀಕರಣದ ನ್ಯಾಯದಿಂದಲೇ ಯುರೋಪ್ ಕೇಂದ್ರಿತ ಸಂಸ್ಕೃತಿಯ ವ್ಯಾಖ್ಯಾನವು ಶುರುವಾದವು. ಹೀಗಾಗಿ ಭಾರತೀಯ ಸಂಸ್ಕೃತಿಯ ಬಗೆಗೆ ಯುರೋಪ್ ಕೇಂದ್ರಿತ ವ್ಯಾಖ್ಯಾನಗಳು ಪ್ರಬಲ ಸಂಸ್ಕೃತಿಯೊಂದು ವ್ಯಾಖ್ಯಾನಿಸಿದ ರೀತಿಯಲ್ಲಿಯೇ ಇವೆ. ದುರ್ಬಲ ಸಂಸ್ಕೃತಿಯ ಬಗ್ಗೆ ಶಕ್ತಿಯುತ ಸಂಸ್ಕೃತಿಯು ಕೇವಲ ಕರುಣೆಯನ್ನು ಮಾತ್ರ ವ್ಯಕ್ತಪಡಿಸಬಲ್ಲದು. ನವೋತ್ತರ ಲೇಖಕರ ಪ್ರಮುಖ ಪ್ರಶ್ನೆ ಇದಕ್ಕೆ ಸಂಬಂಧಿಸಿದಂತೆ ಇದೆ.

ಈ ರೀತಿಯ ಸಾಂಸ್ಕೃತಿಕ ಪರಿವರ್ತನೆಯ ಸಂದರ್ಭದಲ್ಲಿ "ಅಕ್ಷರ ಕೇಂದ್ರಿತ ಸಂಸ್ಕೃತಿ"ಯ ಪರಿಕಲ್ಪನೆಯೂ ಒಡಮೂಡಿತು. ಇಂಗ್ಲಿಷ್ ಶಿಕ್ಷಣ ಕ್ರಮದ ಜೊತೆಗೆ ಬಂದ ಮುಖ್ಯ ಪ್ರಸಕ್ತಿಯಿದು. ಈ ರೀತಿಯ ಅಧ್ಯಯನ ಕ್ರಮದ ದೆಸೆಯಿಂದ ಮಾರ್ಗ – ದೇಸೀಯು ಬೇರೆಯದೇ ಅಂಶಗಳನ್ನು ಒಳಗೊಂಡರೂ ಕೂಡಾ ಅಂತಿಮವಾಗಿ ಅವೆರಡೂ ಒಂದು ನಿರ್ದಿಷ್ಟ ಸಮಾಜದ ಉಪ ಉತ್ಪನ್ನಗಳು ತಾನೆ? ಈ ರೀತಿಯ ಶಿಕ್ಷಣ ಕ್ರಮದ ದೆಸೆಯಿಂದ ನವೋದಯ ಬರಹಗಾರರು ಅಧ್ಯಯನ ಕ್ರಮದಲ್ಲಿ ವಿಭಜನೆಯ ಮಾದರಿಗಳನ್ನು ಬಳಕೆಗೆ ತಂದರು. ಈ ವಿಭಜನೆ ಮಾರ್ಗ – ದೇಸೀ, ನಾಗರಿಕ – ಅನಾಗರಿಕ, ಕಲಿತವರು – ಕಲಿಯದವರು ಇತ್ಯಾದಿ ಪರಿಕಲ್ಪನೆಗಳಲ್ಲಿದೆ. ಈ ವಿಭಜನೆಯ ಮಾದರಿಯು ಮುಖ್ಯವಾಗಿ ಇಂಗ್ಲಿಷ್ ಶಿಕ್ಷಣ ಕ್ರಮದಿಂದ ಬಂದಿರುವಂಥದ್ದು.

ಚಿಕ್ಕಣ್ಣ "ಬಿದಾವರ" ಕತೆಯಲ್ಲಿ ಒಂದು ಪ್ರಶ್ನೆಯು ಬರುತ್ತದೆ. ಜವರ ತಾನು ಇಸ್ಕೂಲಿಗೆ ಬರೋದಿಲ್ಲ ಅಂತ ಯಾವತ್ತೂ ಹೇಳಿರಲಿಲ್ಲ. ತನ್ನ ಯಾರೂ ಬಾ ಅಂತ ಕರೆದಿರಲಿಲ್ಲ. ಆದ್ರೆ ಇವರೆಲ್ಲ ಹೊಡಿಸ್ಕೊಂಡು, ಬಿಡಿಸ್ಕೊಂಡು, ಅತ್ಕೊಂಡು ಕರ್ಕೊಂಡು ಹೋಗ್ತಿದ್ದ ಕಂಡಿದ್ದ. ಈಗ ಏನು ಹೇಳೋದು ? ತಾನು ಯಾರೋ ಅನ್ಯರ ಮಧ್ಯೆ ಸಿಕ್ಕಿ ಹಾಕ್ಕೊಂಡಂತನ್ನಿಸ್ತು. ಆದ್ರೂ ಇವರೆಲ್ಲ ಪದ, ಪಾಠ, ಆಟ ಅದೆಲ್ಲದರ ಮಜಾ ನೋಡಿದ್ದ ತಂಗೆ ಹೊರಗೆ ಹೋಗಕ್ಕಾಗದೆ "ನಿಮ್ಜೊತೇಲಿ ನಾನು ಕೂತ್ಕೊತ್ತೀನ ಅಯ್ಯ" ಅಂತ ಗೋಗರೆದ (ಕಂಡೇರಿ, 2004, ಪು. 164). ಈ ವಿವರವನ್ನು ಓದಿದಾಗ ನಮಗೆ

"ಲೇರಿಯೋಂಕ" ಕಾದಂಬರಿ ನೆನಪಿಗೆ ಬಂದರೆ ಆಶ್ಚರ್ಯವಿಲ್ಲ. ಮೇಲು ಜಾತಿಯವರಿಗೆ ಶಾಲೆ ಹೋಗುವುದು, ಕಲಿಯುವುದು ಭಯ ಹುಟ್ಟಿಸುವ ಸಂಗತಿಯಲ್ಲ. "ಶಾಲಾ ಸಂಸ್ಕೃತಿ" ಅವರಿಗೆ ಅಪರಿಚಿತವಲ್ಲ. ಕೆಳ ಜಾತಿಯ ; ಕೆಳ ವರ್ಗದ ಜನರಿಗೆ "ಸ್ಕೂಲ್ ಕೇಂದ್ರಿತ ಶಿಕ್ಷಣ" ಪದ್ಧತಿಯು ಭಯ ಉಂಟುಮಾಡುವಂಥದ್ದು. ಯಾಕೆಂದರೆ ಅವರ ಸಂಸ್ಕೃತಿಯಿಂದ ಶಿಕ್ಷಣ ಹೊರಗಿನದು, ಜೀವನದ ಬಹುಮುಖ್ಯ ಸಂಗತಿಯೂ ಅಲ್ಲ. ಚಿಕ್ಕಣ್ಣ ಗ್ರಹಿಸಿದ ಈ ಕ್ರಮವು ಈ ದೃಷ್ಟಿಯಿಂದ ಮಹತ್ವದ್ದಾಗಿದೆ.

ಕನ್ನಡ ನವೋದಯ ಸಾಹಿತ್ಯದ ಸಂದರ್ಭದಲ್ಲಿ ಬಂದ ಪ್ರಮುಖ ಸಾಂಸ್ಕೃತಿಕ ಪರಿಭಾಷೆಗಳನ್ನು ಗಮನಿಸಬಹುದು. ರಾಷ್ಟ್ರೀಯ ಸಂಸ್ಕೃತಿ ; ಭಾರತೀಯ ಸಂಸ್ಕೃತಿ ; ಕನ್ನಡ ಸಂಸ್ಕೃತಿ ; ಜಾನಪದ ಸಂಸ್ಕೃತಿ ಮೊದಲಾದ ಸಂಸ್ಕೃತಿಯ ಪರಿಕಲ್ಪನೆಯ ಪರಿಭಾಷೆಗಳು ನಿರ್ದಿಷ್ಟ ಮೌಲ್ಯದ ಅಂಶಗಳನ್ನು ಒಳಗೊಂಡಿದೆ. ಈ ಪರಿಭಾಷೆಗಳು ಮುಖ್ಯವಾಗಿ ರೂಪುತಳೆದಿರುವುದು ವಸಾಹತುಶಾಹಿ ಅನುಭವದ ದ್ರವ್ಯದಲ್ಲಿ. ಈ ಎಲ್ಲಾ ಪರಿಭಾಷೆಗಳು 'ಮುನ್ನಡೆ'ಯ ಅರ್ಥವನ್ನು ಸೂಚಿಸುತ್ತವೆ. ಈ ಸಂದರ್ಭದಲ್ಲಿ ಬಂದ ದೇಸೀಯ ಪರಿಕಲ್ಪನೆಗಳು ಹೀಗಿವೆ. ಅದು ನಾಡಾಡಿಯ ಸಂಸ್ಕೃತಿ, ಆಧುನಿಕವಾದುದಲ್ಲ. ಆದರೆ ಅದರಲ್ಲಿಯೂ ಅಪಾರವಾದ ಜೀವನ ಮೌಲ್ಯವಿದೆ. ಇದು ಚಿಕ್ಕಣ್ಣವರ ನಲುವು.

ಇನ್ನೊಂದು ಅಂಶವನ್ನು ನಾವಿಲ್ಲಿ ಗಮನಿಸಬಹುದು : ರಾಷ್ಟ್ರೀಯತೆ ಮತ್ತು ಕೆಳಜಾತಿಯವರಿಗೆ ಅದರೊಂದಿಗೆ ಇರುವ ಸಂಬಂಧ.

ರಾಷ್ಟ್ರೀಯತೆಯ ಮಾದರಿಯನ್ನು ಸ್ಪಷ್ಟ ಅರ್ಥದಲ್ಲಿ ವಿವರಿಸಬೇಕಾದರೆ ರಾಷ್ಟ್ರದ ಕಲ್ಪನೆಯೇ ಒಂದು ರೀತಿಯಿಂದ ಭ್ರಮಾತ್ಮಕವಾದುದು. ಈ ಕುರಿತಂತೆ ಡಿ. ಆರ್. ನಾಗರಾಜ್ ಹೀಗೆ ಹೇಳುತ್ತಾರೆ. 'ಈ ರಾಷ್ಟ್ರೀಯತೆ ಎನ್ನುವ ಪರಿಕಲ್ಪನೆಯನ್ನು ಮಾರ್ಕ್ಸ್‌ವಾದ ಗ್ರಹಿಸುವ ಚಿಂತನಾಕ್ರಮ ಬೇರೆ ರಾಷ್ಟ್ರೀಯತೆಯ ಶಕ್ತಿ ಮತ್ತು ಮಿತಿಗಳನ್ನು ಮಾರ್ಕ್ಸ್‌ವಾದ ಸಮರ್ಥವಾಗಿ ವಿವರಿಸುತ್ತದೆ' ಎಂದು ನಾಗರಾಜ್ ಒಪ್ಪಿಕೊಳ್ಳುತ್ತಾರೆ. ರಾಷ್ಟ್ರೀಯತೆಯ ಪ್ರಮುಖ ಲಕ್ಷಣಗಳನ್ನು ಅವರು ಹೀಗೆ ಗುರುತಿಸುತ್ತಾರೆ.

1. ಸಮಾನ ಪ್ರಾದೇಶಿಕತೆ
2. ಸಮಾಜ ಮಾರುಕಟ್ಟೆ
3. ಸಮಾನ ಭಾಷೆ (ಹಲವಾರು ಭಾಷೆಗಳಿದ್ದರೂ ಸರಿ ಎಂಬ ನಿಲುವು ಕೂಡಾ ಸಮರ್ಥನೀಯವೇ. ಉದಾ : ಭಾರತ, ರಷ್ಯಾ ಮುಂತಾದೆಡೆಗಳಲ್ಲಿ)
4. ರಾಷ್ಟ್ರೀಯ ಪ್ರಭುತ್ವ (ನೇಷನ್ ಸ್ಟೇಟ್ ಎಂಬರ್ಥದಲ್ಲಿ)
5. ಸಮಾನ ಮಾನಸಿಕ ಸ್ವರೂಪ (ಇದನ್ನೇ ಕೆಲವರು ಹಿಗ್ಗಿಸಿ ಸಂಸ್ಕೃತಿ ಎಂಬರ್ಥದಲ್ಲಿ ಬಳಸಿರುವುದುಂಟು)

(ವಿವರಗಳಿಗಾಗಿ ನೋಡಿ : ಶಿವರುದ್ರಪ್ಪ ಜಿ.ಎಸ್., 1988, ಪು. 4).

ಆದರೆ ಹೆಗಲ್‌ನ ಪ್ರಕಾರ ರಾಷ್ಟ್ರೀಯತೆಯ ಕಲ್ಪನೆ ಒಂದು ಸಾಂಸ್ಕೃತಿಕ ಪರಿಕಲ್ಪನೆಯನ್ನು ಹೊಂದಿಕೊಂಡಿರುತ್ತದೆ. ಸಾಂಸ್ಕೃತಿಕ ಬೆಳವಣಿಗೆಯ ವಾಹಕವನ್ನು ಮಾತ್ರ ರಾಷ್ಟ್ರೀಯ ಪರಿಕಲ್ಪನೆಯ ಜೊತೆಗೆ ಹೆಗಲ್ ಚರ್ಚಿಸುತ್ತಾನೆ (**Cohen, C.A.,** 1987, **P.** 6).

ಸಾಂಪ್ರದಾಯಿಕ ಸಮಾಜದಲ್ಲಿ ಭೂಮಿಯೆನ್ನುವುದು ಸಂಪತ್ತಿನ ಸಂಕೇತವಾಗಿತ್ತು. ಇದರ ನಿಯಮಗಳು ಬೇರೆ ಬೇರೆ ಕಾರಣಗಳಿಗಾಗಿ ಬ್ರಿಟಿಷರ ಕಾಲಘಟ್ಟದಲ್ಲಿ ಬದಲಾಯಿತು. ಸಾಂಪ್ರದಾಯಿಕ ಸಮಾಜದಲ್ಲಿ ಜಮೀನಿನ ಹಕ್ಕು ಮತ್ತು ರಾಜಕೀಯ ಅಧಿಕಾರದ ಜೊತೆಗೆ ಪಡೆದುಕೊಂಡ ಸಂಬಂಧ ಪ್ರಮುಖವಾಗಿತ್ತು. ಈ ಕಾರಣಕ್ಕಾಗಿಯೇ ಗ್ರಾಮೀಣ ಜನಸಮುದಾಯವನ್ನು 'ಕಿರು ಗಣರಾಜ್ಯ' (**Little Republic**) ಎಂದು ಬ್ರಿಟಿಷರು ಕರೆದರು. ಚಿಕ್ಕಣ್ಣ ಇದರ ಕುರಿತು ಮತ್ತು ಯಾವುದೇ ವಿಷಯ ತಿಳಿಯದ ಜನಸಾಮಾನ್ಯರ ಕುರಿತು ಕತೆ-ಕಾದಂಬರಿಗಳಲ್ಲಿ ಬರೆದಿದ್ದಾರೆ. ಅವರಿಗೆ ಹಳ್ಳಿ ಮತ್ತು ಅಲ್ಲಿ ಬದುಕುವ ಜನಸಾಮಾನ್ಯರು ಮುಖ್ಯ.

ವಸಾಹತು ಕಾಲದಲ್ಲಿ ಆಧುನಿಕತೆಯು ಕೂಡಾ ಒಂದು ಅಧಿಕಾರ ಕೇಂದ್ರವಾಯಿತು. ಅದುವೇ ರಾಜಕಾರಣದ ರಚನೆಯನ್ನು ರೂಪಿಸಿತು. ಶಿಕ್ಷಣದ ಮೇಲೆ ಇದರ ಪ್ರಭಾವ ಬೀರಿತು. ಹೊಸ ಹೊಸ ಸೇತುವೆ, ಅಣೆಕಟ್ಟುಗಳು ನಿರ್ಮಾಣಗೊಂಡವು. ಇದಕ್ಕೆ ಪೂರಕವಾಗಿ ಒಂದು ಉದಾಹರಣೆ ಕೈಗೆತ್ತಿಕೊಳ್ಳಬಹುದು : ಭಾರತೀಯ ನಾಟಿ ವೈದ್ಯಕೀಯ ಪದ್ಧತಿಗೂ ನಿಸರ್ಗಕ್ಕೂ ಇರುವ ಸಂಬಂಧ. ಇದಕ್ಕೆ ವಿಜ್ಞಾನದ ಆಧಾರವಿಲ್ಲ. ಇದು ತಾನೇ ತಾರ್ಕಿಕ ಸತ್ಯವನ್ನು ಹೇಳುತ್ತೇನೆಂದು ಪ್ರತಿಪಾದಿಸುವುದಿಲ್ಲ. "ಸುಮ್ಮಾನ" ಕಥೆಯ ಕುಟೀರನಿಗೆ ಗೊತ್ತಿರುವುದು ಕುರಿ ಮೇಯಿಸುವುದು ಮಾತ್ರ. ಕುರಿಯೊಂದಿಗೆ ಅವನಿಗೆ ಅವಿನಾಭಾವ ಸಂಬಂಧವಿದೆ.

ಪ್ರಾದೇಶಿಕವಾಗಿ ಭಾರತದಲ್ಲಿ ಬೇರೆ ಬೇರೆ ಜಾತಿಗಳಿದ್ದವು. ಇವುಗಳಿಗೆ ಬೇರೆ ಬೇರೆ ರೀತಿ-ರಿವಾಜುಗಳಿದ್ದವು. ಪ್ರತಿಯೊಂದು ಜಾತಿಗಳ ಕಸುಬುಗಳು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ರೀತಿಯಲ್ಲಿರುತ್ತಿದ್ದವು. ಪ್ರಾದೇಶಿಕವಾಗಿ ಜಾತಿಗಳ ಆರ್ಥಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಯಜಮಾನಿಕೆಯ ರೂಪ ಬೇರೆ ಬೇರೆ ನಮೂನೆಗಳಲ್ಲಿರುತ್ತಿದ್ದವು. ಅರ್ಜುನ ಅಪ್ಪಾದೊರೈಯವರು ಈ ಕುರಿತು ಹೀಗೆ ಹೇಳುತ್ತಾರೆ (1981, ಪು. 119). "ದೇವಸ್ಥಾನದಲ್ಲಿ ದೇವರನ್ನು ಪೂಜಿಸುವವನು ಅರ್ಚಕ. ಆದರೆ ದೇವರ ಸೇವೆ ಮಾಡುವವರೆಲ್ಲಾ ಅರ್ಚಕರಾಗಿರಬೇಕಾಗಿಲ್ಲ". ಪ್ರತಿಯೊಂದು ಊರಿನಲ್ಲಿಯೂ ದೇವಸ್ಥಾನಗಳಿದ್ದವು. ಆಯಾ ಊರಿನ ದೇವತೆಗಳಿಗೆ ಬೇರೆ ಬೇರೆ ಜವಾಬ್ದಾರಿಗಳಿದ್ದವು. ಅವುಗಳ ಕೆಲಸವೆಂದರೆ ಊರಿನ ರಕ್ಷಣೆ, ಊರಿಗೆ ಮಳೆ ಬರಿಸುವುದು, ಬೆಳೆಗಳ ಸಂರಕ್ಷಣೆ, ರೋಗ-ರುಜಿನಗಳಿಂದ ಜನರನ್ನು ದೂರ ಇಡುವುದು ಇತ್ಯಾದಿ. 'ನಿಶುಬುದೆಡೆಗೆ'ಯಲ್ಲಿ ಬರುವ ಕೆಲವು ವಿವರಗಳು ಈ ದೃಷ್ಟಿಯಿಂದ ಮುಖ್ಯವಾಗಿದೆ (2007, ಪು. 69).

ಪ್ರಾದೇಶಿಕ ಸಂಸ್ಕೃತಿಗೂ, ಕೃಷಿಯಾಧಾರಿತ ಜೀವನ ಕ್ರಮಕ್ಕೂ ಸಂಬಂಧವಿದೆ. ಕೃಷಿಯೇ ಪ್ರಾದೇಶಿಕ ಸಂಸ್ಕೃತಿಯ ಮೇಲೆ ಪರಿಣಾಮ ಬೀರುತ್ತದೆ. ಸಾಂಸ್ಕೃತಿಕ ಮೌಲ್ಯ, ಅದರ ಬಗೆಗಿನ ನಂಬಿಕೆಗಳು, ವಸಾಹತು ಆಡಳಿತವು ಕಂದಾಯ ಹೇರಿರುವುದು ಕೂಡಾ ಇದೇ ಕಾರಣಕ್ಕೆ. ರಾಷ್ಟ್ರೀಯ ಸಂಸ್ಕೃತಿ ಸಾಮಾಜಿಕ ಸ್ವಾತಂತ್ರ್ಯದ ಪರಿಕಲ್ಪನೆಗೂ ಗ್ರಾಮೀಣ ಸಮಾಜಕ್ಕೆ ಹೇಳಿಕೊಳ್ಳುವಂಥ ನಿಕಟ ಸಂಬಂಧಗಳಿಲ್ಲ. ರಾಷ್ಟ್ರೀಯ ಸಂಸ್ಕೃತಿ ಮತ್ತು ಸ್ವಾತಂತ್ರ್ಯದ ಪರಿಕಲ್ಪನೆಗೆ ವಿಶ್ವಾತ್ಮಕ ಅರ್ಥವಂತಿಕೆಯಿದೆ. ಆದರೆ ಸಾಂಸ್ಕೃತಿಕ ಮೌಲ್ಯವು ವಿದೇಶಿ ಯಜಮಾನಿಕೆಯನ್ನು ವಿರೋಧಿಸುತ್ತದೆ. ಸಾಂಸ್ಕೃತಿಕವಾಗಿ ಸ್ವಯಂ ಸಂಪೂರ್ಣತೆಯ ಪರಿಕಲ್ಪನೆಯು ವಿದೇಶಿ ಆಡಳಿತ ಕ್ರಮವನ್ನು ಪ್ರತಿರೋಧಿಸುತ್ತದೆ. 'ನಮ್ಮ ಸಂಸ್ಕೃತಿ' ಎನ್ನುವುದು 'ಹೊಸ ರಾಜಕೀಯ' ಪರಿಕಲ್ಪನೆಯಷ್ಟೇ ಅಲ್ಲ. ಅದು ಯಾವುದೇ ಆಯುಧಗಳಿಲ್ಲದೆ 'ವಿದೇಶೀ'ಯತೆಯನ್ನು ವಿರೋಧಿಸುತ್ತದೆ. ಪ್ರಾದೇಶಿಕ ಸಂಸ್ಕೃತಿಯು 'ನೆನಪು', 'ನಂಬಿಕೆ', 'ಜೀವನ್ಮುಖಿ' ಧೋರಣೆಯನ್ನು ಒಳಗೊಂಡಿರುತ್ತದೆ. ಅದು ರಾಜಕಾರಣವಲ್ಲ. ಸೈನ್ಯದ ಪರಿಕರ (ಆಯುಧ) ಆರ್ಥಿಕತೆ, ಸಂಪನ್ಮೂಲದ ಕ್ರೋಢೀಕರಣದ ಮೂಲಕ ರಾಜಕಾರಣ ತನ್ನ ಆಳ್ವಿಕೆಯನ್ನು ನಡೆಸುತ್ತದೆ. ಈ ಹಿನ್ನೆಲೆಯಲ್ಲಿ "ಕಂಡೇರಿ" ಕೃತಿಯನ್ನು ಗ್ರಹಿಸಬಹುದು.

ಪ್ರಾದೇಶಿಕವಾಗಿ ಬೇರೆ ಬೇರೆ ಜನರು ಇರುತ್ತಾರೆ. ಅವರಿಗೆ ಬೇರೆ ಬೇರೆ ಕಸುಬುಗಳಿರುತ್ತವೆ. ವಸಾಹತು ಆಡಳಿತ ಈ ಪ್ರಶ್ನೆಗಳನ್ನು ಎತ್ತಿಕೊಂಡಿರಲಿಲ್ಲ. ಸ್ವಾತಂತ್ರ್ಯ ಹೋರಾಟಗಾರರು ನಮ್ಮಲ್ಲಿ ಸಣ್ಣ ಪುಟ್ಟ ಸಮಸ್ಯೆಗಳಿವೆ. ಅದನ್ನು ಸ್ವಾತಂತ್ರ್ಯ ಬಂದ ಮೇಲೆ ಬಗೆ ಹರಿಸೋಣವೆಂದು ಹೇಳಿಕೊಳ್ಳುತ್ತಿದ್ದರು. ಈ ದೃಷ್ಟಿಯಿಂದ 'ರಾಷ್ಟ್ರೀಯ ಸಂಸ್ಕೃತಿ', 'ರಾಷ್ಟ್ರೀಯ ಚಳುವಳಿ'ಗೆ ಮುನ್ನಡೆಸುವುದಕ್ಕೆ ನೇತಾರರು ಬೇಕಿದ್ದರು. ನಾವು ಮಾತಾಡುವ ಪ್ರಾದೇಶಿಕ ಸಂಸ್ಕೃತಿಗಳಿಗೆ ಈ ರೀತಿಯ ಯಾವ ಅಗತ್ಯವೂ ಇರಲಿಲ್ಲ. ಸ್ವಾತಂತ್ರ್ಯ ಹೋರಾಟದ ಮುಖ್ಯ ಗುರಿ – ಸ್ವಾತಂತ್ರ್ಯ ಪಡೆಯುವುದು ಮತ್ತು ಆ ಮೂಲಕ ರಾಷ್ಟ್ರವನ್ನು ಕಟ್ಟುವುದು ಮಾತ್ರ ಅವರ ಗುರಿಯಾಗಿತ್ತು. ಮತ್ತು ಅದೇ ಕಾರಣಕ್ಕೆ ಎಲ್ಲಾ ಜನರೊಂದಿಗೆ ಸೇರಿ ಹೋರಾಟ ಮಾಡಬೇಕೆನ್ನುವ ಉದ್ದೇಶ ಅವರಿಗಿತ್ತು. ಈಗಾಗಲೇ ಹೇಳಿರುವಂತೆ, ಒಂದೊಂದು ಪ್ರಾದೇಶಿಕ ಸಂಸ್ಕೃತಿಗೂ ವಿಶಿಷ್ಟ ಲಕ್ಷಣಗಳಿರುತ್ತವೆ. ಆದರೆ ರಾಷ್ಟ್ರೀಯತೆ "ಏಕತೆ"ಯನ್ನು ಪ್ರತಿಪಾದಿಸುತ್ತದೆ. ಒಂದು ಗುಂಪಿನಿಂದ ಮತ್ತೊಂದು ಗುಂಪಿಗೆ ಬರುವಾಗ ಅದು ಬೇರೆ ಲಕ್ಷಣ ಹೊಂದುವ ಹಾಗಿರಲಿಲ್ಲ. 'ದಂಡೆ' ಎತ್ತಿಹಿಡಿಯುವ ಅಂಶವಿದೇ.

ವಸಾಹತುಶಾಹಿ ಅನುಭವದಿಂದ ಹುಟ್ಟಿದ 'ಸ್ವಾತಂತ್ರ್ಯ'ದ ಪರಿಕಲ್ಪನೆ ರಾಜಕೀಯ,

ಸಾಂಸ್ಕೃತಿಕ ಹೋರಾಟವಾಗಿದೆ. 'ಸ್ವಾತಂತ್ರ್ಯ ಹೋರಾಟ' ಎಂಬುದನ್ನು ಹೆಚ್ಚು ಒತ್ತು ಕೊಟ್ಟು ಗಮನಿಸಬೇಕು. 'ಹೋರಾಟ' ಇಲ್ಲಿ ಪ್ರಮುಖ ಅಂಶ. ಸ್ವಾತಂತ್ರ್ಯ ಹೋರಾಟದಲ್ಲಿ ವ್ಯಕ್ತಿಯೊಬ್ಬನ ಸ್ಥಾನಮಾನ ಮುಖ್ಯವಲ್ಲ. ಸ್ವಾತಂತ್ರ್ಯ ಬಂದರೆ ಪ್ರತಿಯೊಬ್ಬ ವ್ಯಕ್ತಿಗೂ ಹೊಸ ಸ್ಥಾನಮಾನ ದೊರೆಯಬಹುದು. ನಮ್ಮ ಸರಕಾರದಿಂದ ಹೊಸ ಸ್ಥಾನಮಾನ ದೊರೆಯಬಹುದು. ನಮ್ಮ ಸರಕಾರದಿಂದ ಹೊಸ ಸಾಧ್ಯತೆ ಹುಟ್ಟಿಕೊಳ್ಳಬಹುದು ಎಂದು ಸ್ವಾತಂತ್ರ್ಯ ಹೋರಾಟಗಾರರು ಪ್ರಬಲವಾಗಿ ನಂಬಿದ್ದರು ಮತ್ತು ಅಧಿಕಾರ ನಮ್ಮದೇ

ಆದಾಗ ಎಲ್ಲಾ ಜನರು ಉದ್ಧಾರವಾಗಬಹುದು ಎಂದು ಅವರು ನಂಬಿದ್ದರು. ವಾಸ್ತವವಾಗಿ 'ಅಧಿಕಾರ ಕೇಂದ್ರ' ಬದಲಾವಣೆಯ ಪ್ರಶ್ನೆಯೂ ಹೌದು. ಬ್ರಿಟಿಷ್ ಅಧಿಕಾರದ ಕೇಂದ್ರವು ಭಾರತದ ಕೇಂದ್ರವಾಗಿ ಪರಿವರ್ತನೆಗೊಳ್ಳುವುದು ಇಲ್ಲಿ ಮುಖ್ಯ. ಇಲ್ಲಿಯೇ ಗಮನಿಸಬೇಕಾದ ಅಂಶವೆಂದರೆ ಸ್ವಾತಂತ್ರ್ಯ ಸಂಗ್ರಾಮದ ಮುಂಚೂಣಿ ನಾಯಕರಾದ ಗಾಂಧಿ ಪ್ರಾರಂಭಿಸಿದ 'ಸ್ವಾವಲಂಬನೆ', 'ಅಸ್ಪೃಶ್ಯತಾ ನಿವಾರಣೆ', 'ಸತ್ಯಾಗ್ರಹ', 'ಅಹಿಂಸೆ', 'ಕರನಿರಾಕರಣೆ' ಎಲ್ಲರಿಗೂ ಅರ್ಥವಾಗುವುದು ಸಾಧ್ಯವಿರಲಿಲ್ಲ. ಹಾಗೆಯೇ ಗಾಂಧಿಯವರ "ಅಸ್ಪೃಶ್ಯತೆಯ ನಿವಾರಣೆ" ಮೇಲು ಜಾತಿಯವರಿಗೆ ಇರಿಸು ಮುರಿಸನ್ನು ಉಂಟುಮಾಡಿತ್ತು. ಕೆಳ ಜಾತಿಯ, ಕೆಳವರ್ಗದವರಿಗೆ ಗಾಂಧಿಯ 'ಸತ್ಯಾಗ್ರಹ', 'ಅಹಿಂಸೆ' ಅರ್ಥವಾಗುವುದು ಸಾಧ್ಯವಿರಲಿಲ್ಲ. "ಕಂಡೇರಿ" ಸಂಕಲನದ ಬಹುತೇಕ ಕತೆಗಳು "ಸತ್ಯಾಗ್ರಹ", "ಅಹಿಂಸೆ", "ಸಮಾನತೆ"ಯೆಂಬ ಪರಿಭಾಷೆಗಳನ್ನು ಬಳಸಿಕೊಂಡಿಲ್ಲ.

ಪ್ರಾದೇಶಿಕ ಸಂಸ್ಕೃತಿಯಲ್ಲಿ ದಿನದಿನದ ಜೀವನ ಕ್ರಮ ಮಾತ್ರ ಮುಖ್ಯ, ಉಳಿದುದು ನಗಣ್ಯ. ಒಂದೆಡೆ ತೀರಾ ಸಾಮಾನ್ಯ ಅನಕ್ಷರಸ್ಥ ಮನುಷ್ಯರು ಮತ್ತೊಂದು ಕಡೆಯಿಂದ ಬ್ರಿಟಿಷ್ ಆಡಳಿತಕಾರರು ಇದ್ದಾಗ ಬುದ್ಧಿ ಜೀವಿಗಳಿಗೆ ದೊರೆತ ಹೊಸ ರೀತಿಯ ಸ್ಥಾನಮಾನಗಳು ದೊರೆತವು. ರಾಜಕೀಯ ಹೋರಾಟ ಮತ್ತು ರಾಜಕೀಯ ಸ್ವಾತಂತ್ರ್ಯದ ಪ್ರಶ್ನೆಯು ಎಲ್ಲಾ ಕಡೆಗೂ ಚಾಲ್ತಿಗೆ ಬರಬೇಕೆಂಬುದು "ರಾಜಕೀಯ ನಾಯಕ"ರ ಗುರಿಯಾಗಿತ್ತು. ವಸಾಹತುಶಾಹಿ ಕಲಿಕೆಯ ಕ್ರಮದಿಂದ ಸ್ಥಳೀಯ ವಿದ್ಯಾವಂತರು ತಾಂತ್ರಿಕ ಜ್ಞಾನ ಹೊಂದಿದ್ದರು. ಇದರ ಪರಿಣಾಮವಾಗಿ ಕೆಲವು ಸಂಪ್ರದಾಯಗಳ ಬಗ್ಗೆ 'ಸಾಂಸ್ಕೃತಿಕ ಪೂರ್ವಾಗ್ರಹ'ಗಳು ಇದ್ದವು. ರಾಷ್ಟ್ರೀಯವಾದಿ ಚಿಂತಕರಿಗೆ ರಾಜಕೀಯ ಸ್ವಾತಂತ್ರ್ಯ ಮಾತ್ರ ಮುಖ್ಯವಾಗಿತ್ತು. ಆದರೆ ಅವರು 'ಸಾಂಸ್ಕೃತಿಕವಾಗಿ' ನಿರ್ದಿಷ್ಟ ಅನನ್ಯತೆಯನ್ನು ಹೊಂದಿರಲಿಲ್ಲ. ವಸಾಹತು ಆಡಳಿತದಿಂದಾಗಿ ಧಾರ್ಮಿಕ ನಾಯಕರು ಸಾಂಪ್ರದಾಯಿಕ ಯಜಮಾನಿಕೆಯನ್ನು ಕಳೆದುಕೊಂಡರು. ಆದರೆ ಅವರು ಸ್ವಾತಂತ್ರ್ಯ ಹೋರಾಟದಲ್ಲಿಯೂ ಭಾಗವಹಿಸಲಿಲ್ಲ.

ವಿದ್ಯಾವಂತರು ಹಾಗೂ ಸರಕಾರಿ ನೌಕರಿಯಲ್ಲಿ ಇದ್ದವರು 'ಸಾಂಸ್ಕೃತಿಕ' ಏಕಾಂಗಿತನ ಹೊಂದಿದ್ದವು ಮಾತ್ರವಲ್ಲ ಅವರ ವರ್ತನೆಗಳು ಪಶ್ಚಿಮ ಅನುಕರಿಸುವ ಮಾದರಿಯಲ್ಲಿತ್ತು. ಇದರಿಂದ ಹೊಸ ಸಾಂಸ್ಕೃತಿಕ ವಾತಾವರಣ ನಿರ್ಮಾಣವಾಯಿತು. ಸ್ವಾತಂತ್ರ್ಯ ಹೋರಾಟದ ಪರಿಕಲ್ಪನೆಯು 'ರಾಷ್ಟ್ರೀಯ ಸಂಸ್ಕೃತಿ'ಯ ವ್ಯಾಖ್ಯೆಯಾಯಿತು. ಗಾಂಧೀಜಿಯವರ ಮುಖ್ಯ ಕನಸು ಇದ್ದುದು 'ಭಾರತದಲ್ಲಿ ರಾಮರಾಜ್ಯ'ವನ್ನು ಕಟ್ಟುವುದು. ಇದರಲ್ಲಿ ರಾಜಕೀಯ ತಂತ್ರಗಾರಿಕೆಯಿದೆ. ಮತ್ತೊಂದು ಕಡೆಯಿಂದ ನೈತಿಕತೆಯ ಅಂಶವೂ ಇತ್ತು. ಚಿಕ್ಕಣ್ಣನ 'ನಿರ್ಗಮನ', 'ಕಿವಿಯ ಮೇಲಿನ ಕೂದಲು' ಈ ದೃಷ್ಟಿಯಿಂದ ಗಮನಾರ್ಹವಾಗಿದೆ.

ಕೊನೆಯದಾಗಿ, ಕೆಲವು ಮಾತುಗಳನ್ನು ಪ್ರಸ್ತಾವಿಸಬಹುದು. ಪ್ರಾದೇಶಿಕ ಸಂಸ್ಕೃತಿಯ ಪ್ರಶ್ನೆಯು ನಿರ್ದಿಷ್ಟ ಜನರು ನಿರ್ದಿಷ್ಟ ಪ್ರದೇಶದಲ್ಲಿ ಬದುಕುವ ಕ್ರಮವನ್ನು ಒಳಗೊಂಡಿರುತ್ತದೆ. ವಸಾಹತು ಕಾಲದ ಸಂದರ್ಭದಲ್ಲಿ ಪ್ರಾದೇಶಿಕ ಸಂಸ್ಕೃತಿಯ ಪ್ರಶ್ನೆಯು ನವಸಾಹತು

ಧೋರಣೆಯಾಗಿ ಪರಿವರ್ತಿತವಾಯಿತು. ನಿರ್ವಸಾಹತೀಕರಣದ ಪ್ರಮುಖ ತಾತ್ವಿಕ ನಿಲುವೆಂದರೆ–ಪ್ರಾದೇಶಿಕತೆ ಸಂಕೇತ. ಬ್ರಿಟಿಷರು ಭಾರತೀಯರನ್ನು ತಮ್ಮ ಗುಲಾಮರೆಂದು ಭಾವಿಸಿದರೆ ಪ್ರಾದೇಶಿಕ ಸಂಸ್ಕೃತಿಯ ಪರಿಕಲ್ಪನೆಯು ಅದಕ್ಕಿಂತ ವಿರುದ್ಧವಾದ ಅರ್ಥದಲ್ಲಿ ಬಳಕೆಯಾಯಿತು. ಬ್ರಿಟಿಷರು ಭಾರತೀಯರನ್ನು ಅರ್ಥವಿಸಿಕೊಂಡ ಕ್ರಮವೇ ಬೇರೆ. ಆದರೆ ಪ್ರಾದೇಶಿಕ ಸಂಸ್ಕೃತಿಯು ಅದರದೇ ಎನ್ನಬಹುದಾದ ಸಂಕಥನವನ್ನು ರೂಪಿಸಿತು. ಹೀಗಾಗಿ ಭಾರತೀಯರು ತುಂಬಾ ಪ್ರಸಿದ್ಧ ಎನ್ನಬಹುದಾದ ಪರಿಕಲ್ಪನೆಗಳನ್ನು ಹುಟ್ಟುಹಾಕಿದರು : ಅದು ತಾಯ್ನಾಡಿನ ; ಮಾತೃಭಾಷೆಯ ಸಂಕೇತಗಳಾದವು. ಹೊರಗಿನ ಬಂದವರು (ಮ್ಲೇಚ್ಛರು) ಮತ್ತು ಒಳಗಿನವರು (ಸ್ಥಳೀಯರು) ಬೇರೆ ಬೇರೆಯೆಂಬ ಸಂಗತಿಯನ್ನು ಹುಟ್ಟುಹಾಕಿತು. ಹೊರಗಿನಿಂದ ಬಂದವರು ಪರಕೀಯರು. ಈ ದೇಶ ಅವರ ತವರೂರಲ್ಲ. ಮತ್ತು ಸ್ಥಳೀಯರು ಬ್ರಿಟಿಷರನ್ನು "ಬಿಳಿಯರು". ಅವರಿಗೆ ಈ ದೇಶದ ಸಂಗತಿಯು ಗೊತ್ತಿಲ್ಲವೆಂಬಂತೆ ವರ್ತಿಸಿದರು. ಯುರೋಪಿಯನ್ ಮಾದರಿಯ ನಾಗರಿಕತೆಯ ಪ್ರಶ್ನೆಯು ಭಾರತೀಯರಿಗೆ ಅರ್ಥಪೂರ್ಣವೆಂದು ಅನಿಸಲಿಲ್ಲ. ಚಿಕ್ಕಣ್ಣ ಪ್ರಾದೇಶಿಕ ಸಂಸ್ಕೃತಿಯನ್ನು ಪುನರ್ ಕಟ್ಟುತ್ತಾರೆ.

ಇಷ್ಟೆಲ್ಲಾ ಹೇಳಿದ ಮೇಲೆ ಕೆಲವು ವಿಷಯಗಳನ್ನು ಇಲ್ಲಿ ಪ್ರಸ್ತಾವಿಸಬೇಕು. ಕತೆಗಳ ಭಾಷೆಯು ಕೆ.ಆರ್. ನಗರದ ಎಡತೊರೆಯ ಪ್ರದೇಶಕ್ಕೆ ಸಂಬಂಧಿಸಿದ್ದು. ಪ್ರಾದೇಶಿಕ ಭಾಷೆ; ಅಲ್ಲಿಯ ಸಂಸ್ಕೃತಿ ; ಅದರ ಸಾರವತ್ತಾದ ತಿರುಳು ಇಲ್ಲಿಯ ಕತೆಗಳಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಜಾಗತೀಕರಣ, ಮಾರುಕಟ್ಟೆ ಕೇಂದ್ರಿತ ಸಂಸ್ಕೃತಿಯು ನಮ್ಮನ್ನು ಆವರಿಸುತ್ತಿರುವಾಗ ಅದಕ್ಕೆ ವಿರುದ್ಧ ಪ್ರಾದೇಶಿಕ ಸಂಸ್ಕೃತಿಯ ವಿವರಗಳು ಮುಖ್ಯವಾಗಿದೆ.

ಈ ದೃಷ್ಟಿಯಿಂದ ಚಿಕ್ಕಣ್ಣ ಗ್ರಾಮೀಣ ಬದುಕಿನ ಸಂವೇದನೆಯನ್ನು ಅರ್ಥಪೂರ್ಣವಾಗಿ ನಿರೂಪಿಸಿದ್ದಾರೆ. ಜನಸಾಮಾನ್ಯರು ಹೇಗೆ ಬದುಕುತ್ತಿದ್ದಾರೆ ಎಂದು ಚಿತ್ರಿಸಿದ್ದಾರೆ. ಅದಕ್ಕಾಗಿಯೇ ಅವರ ಬರಹಗಳನ್ನು ಬೇರೆ ಬೇರೆ ನಿಕಷಗಳ ಮೂಲಕ ಅರೆದು ನೋಡಬಹುದು. ವಸಾಹತೋತ್ತರ ಸಂದರ್ಭದಲ್ಲಿ ಕನ್ನಡದ ಒಬ್ಬರು ಲೇಖಕರನ್ನು ಮಾತ್ರ ಗಮನದಲ್ಲಿ ಇಟ್ಟು ಇಲ್ಲಿ ಚರ್ಚಿಸಲಾಗಿದೆ. ಒಂದು ಪರಿಕಲ್ಪನೆಯ ಮೂಲಕ ಚಿಕ್ಕಣ್ಣರ ಪ್ರವೇಶಿಸಲಾಗಿದೆಯೇ ಹೊರತು ಇದು ವಿಮರ್ಶೆ ಎಂದು ತಿಳಿಯಬಾರದು. ಲೇಖಕರ ಮಿತಿಗಳನ್ನೇ ಒತ್ತಿ ಹೇಳಲು ಹೊರಟಿಲ್ಲ.



# 15. ವಸಾಹತೋತ್ತರ ಕಾಲದ ಸಮಸ್ಯೆ ಮತ್ತು ಮೀಯುವ ಆಟ : ಸ್ತ್ರೀವಾದಿ ಓದು

ಎಚ್. ನಾಗವೇಣಿಯವರ 'ಮೀಯುವ ಆಟ' ಬಂದಿರುವುದು 2005 ರಲ್ಲಿ. ಅದಕ್ಕಿಂತ ಮೊದಲು ಅವರ 'ಗಾಂಧಿ ಬಂದ ' ಕಾದಂಬರಿ ಹಾಗೂ 'ನಾಕನೇ ನೀರು' ಕೃತಿಗಳು ಬಂದಿದ್ದು ಓದುಗರ ಗಮನ ಸೆಳೆದಿತ್ತು. 'ಗಾಂಧಿ ಬಂದ' ಕಾದಂಬರಿ ವಾಸ್ತವತಾವಾದದಿಂದ ಬಂದ ಕಾದಂಬರಿಯಾಗಿದ್ದು ಲಿಂಗತಾರತಮ್ಯ ನೀತಿಯನ್ನು ವಿಶಿಷ್ಟವಾಗಿ ಮಂಡಿಸುತ್ತದೆ. ವಾಸ್ತವತೆಯನ್ನು ಅರ್ಥಮಾಡಿಕೊಳ್ಳುವಾಗ ಗಂಡಸರು ಅದನ್ನು ಅರ್ಥಮಾಡಿಕೊಳ್ಳುವುದಕ್ಕೂ, ಸ್ತ್ರೀಯರು ಅರ್ಥಮಾಡಿಕೊಳ್ಳುವುದಕ್ಕೂ ಭಿನ್ನತೆಯಿದೆ. ಅಂದರೆ ಸ್ತ್ರೀಯರು ಅವರು ನಿಜವಾಗಿಯೂ ಸ್ತ್ರೀವಾದಿಯಾಗಿದ್ದಾಗ ವಾಸ್ತವತೆಯಲ್ಲಿ ಅಡಕವಾಗಿರುವ ಪಿತೃ ಸಂಸ್ಕೃತಿಯ ಎಳೆಯನ್ನು ಸೂಕ್ಷ್ಮವಾಗಿ ಮಂಡಿಸಲು ಸಾಧ್ಯ. ಅದೇ ವಾಸ್ತವತೆಯನ್ನು ಪುರುಷಕೇಂದ್ರಿತ ದೃಷ್ಟಿಕೋನವು ಇರುವ ವ್ಯವಸ್ಥೆಯನ್ನು ಇರುವ ಹಾಗೆ ಮಂಡಿಸುವುದು ಮಾತ್ರವಲ್ಲ. ಅದರಲ್ಲಿ ಹೆಣ್ಣಿನ ನೋವು ಎಷ್ಟು ಮಡುಗಟ್ಟಿದೆಯೆಂದು ಅರ್ಥಮಾಡದೆ ಹೋಗಬಹುದು. ಈ ದೃಷ್ಟಿಯಿಂದ ಸಮಕಾಲೀನ ವಾಸ್ತವದ ಚರಿತ್ರೆಯನ್ನು ಅದರಲ್ಲಿರುವ ತಾರತಮ್ಯ ನೀತಿಗಳನ್ನು ಅರ್ಥಮಾಡಿಕೊಳ್ಳಲು ಅನುಕೂಲ ಕಲ್ಪಿಸುವ ಸಾರಾ ಅವರ 'ಚಂದ್ರಗಿರಿಯ ತೀರದಲ್ಲಿ', 'ಸಹನಾ', 'ಚಪ್ಪಲಿಗಳು', ಚಂಪಾವತಿಯವರ 'ಶಿವಗಂಗಾ' ಮುಂತಾದ ಕೃತಿಗಳ ಸಾಲಿನಲ್ಲಿಯೇ 'ಗಾಂಧಿ ಬಂದ ' 'ಮೀಯುವ ಆಟ' ಕೃತಿಗಳೂ ನಿಲ್ಲುತ್ತವೆ. ಕಳೆದ ಇಪ್ಪತ್ತು ವರ್ಷಗಳಲ್ಲಿ ಲೇಖಕಿಯರು ಬರೆಯತೊಡಗಿದ ವಿಷಯಗಳು ; ಅವರ ಬರಹದ ರೂಪ ತುಂಬಾ ಕುತೂಹಲ ಹುಟ್ಟಿಸುತ್ತದೆ. ಲೇಖಕಿಯರಲ್ಲಿ – ವಿಮರ್ಶಕಿಯರಿದ್ದಾರೆ. ಸಣ್ಣ ಕತೆಗಾರ್ತಿಯರಿದ್ದಾರೆ. ಕಾದಂಬರಿಗಾರ್ತಿಯರಿದ್ದಾರೆ. ಪತ್ರಿಕೆಯ ಸಂಪಾದಕಿಯರಿದ್ದಾರೆ. ಸಿನಮಾ ನಿರ್ದೇಶಕಿಯರಿದ್ದಾರೆ. ಅಂದರೆ ಅವರು ಶೈಕ್ಷಣಿಕ ವಲಯ ಬೌದ್ಧಿಕ ಪರಿಕರಗಳನ್ನು ಸಮರ್ಥವಾಗಿ ಬಳಸುತ್ತಿದ್ದಾರೆ ಎಂದೇ ಅರ್ಥ.

ವಿಮರ್ಶಕರು ಹಳೆಯ ರೀತಿಯ ಯಜಮಾನ ಪರಂಪರೆಯ ಧೋರಣೆಯಂತೆ ಈ ಮಹಿಳೆಯರು ಯಾಕೆ ಬರೆಯುತ್ತಾರೆ. ಅಡುಗೆ ಮಾಡಿಕೊಂಡು ಇದ್ದರೆ ಸಾಕು ಅಂತ ಹೇಳ್ತಾ ಇಲ್ಲ. ತಿರುಮಲಾಂಬಾ ಅವರ ಬಗ್ಗೆ ಮಾಸ್ತಿಯವರು ಬರೆದಂತೆ ಈಗ ಯಾವ ವಿಮರ್ಶಕನೂ ಬರೆಯುವುದಿಲ್ಲ. ಆ ಧೋರಣೆಗಳು ಬದಲಾಗಿವೆ. ಈಗ ಯಾರು ಕೂಡಾ ಈ ಮಹಿಳೆಯರು ಜನಪ್ರಿಯ ಕಾದಂಬರಿ ಮಾತ್ರ ಬರೆಯುತ್ತಾರೆಂದು ಗಿರಡ್ಡಿ ಗೋವಿಂದರಾಜರಂತೆ ಮೂಗು ಮುರಿದುಕೊಂಡು ಕೇಳುವುದಿಲ್ಲ. ಇದು ಮೂಲತಃ ಸಾಮಾಜಿಕ ಮತ್ತು ಚಾರಿತ್ರಿಕ ಬದಲಾವಣೆಯನ್ನು ಸೂಚಿಸುತ್ತದೆ. ಈಗ ಮಹಿಳೆಯರನ್ನು ಶಿಕ್ಷಣವಂಚಿತರು ಎಂದು ಸಾರಾಸಗಟಾಗಿ ಕರೆಯುವಂತಿಲ್ಲ. ಸಾಂಪ್ರದಾಯಿಕ ಉತ್ಪಾದನೆಯ ಕ್ರಮ ಈಗ ಇಲ್ಲವಾಗಿದೆ. ಮಹಿಳೆಯರು ಅಡುಗೆ ಮಾಡಿಕೊಂಡು ಮಾತ್ರ ಬದುಕಬೇಕಾದ ಅವಶ್ಯಕತೆಯಿಲ್ಲ (ಕೆಳ ವರ್ಗದ ಸ್ತ್ರೀಯರು ಮನೆಯ ಹೊರಗಿನ ಕೆಲಸ ಮಾಡುತ್ತಿದ್ದರು).

ಆಧುನಿಕ ಉತ್ಪಾದನೆಯ ಕ್ರಮದಲ್ಲಿ ಮಹಿಳೆಯರೂ ಮನೆಯಿಂದ ಹೊರಗೆ ಬಂದು ದುಡಿಯಬೇಕಾದ ಅವಶ್ಯಕತೆಯು ಸೃಷ್ಟಿಯಾಗಿದೆ. ಮಧ್ಯಮವರ್ಗದ ಕುಟುಂಬದ ಸ್ವರೂಪದಲ್ಲಿಯೂ ವ್ಯಾಪಕ ಬದಲಾವಣೆಯಾಗಿದೆ. ಕೂಡು ಕುಟುಂಬಗಳು ಗೈರು ಹಾಜರಿಯಾಗಿವೆ. ಕೌಟುಂಬಿಕ ಮೌಲ್ಯಗಳು ಕೂಡಾ ಬದಲಾಗಿವೆ. ಆಧುನಿಕ ಯುಗದಲ್ಲಿ ಬೇರೆ ಬೇರೆ ಕಸುಬುಗಳಲ್ಲಿ ಮಹಿಳೆಯರು ತೊಡಗಿಸಿಕೊಳ್ಳಬೇಕಾದ ಪ್ರಸಂಗ ಬಂದಿದೆ.

ಇದರಿಂದ ಬ್ಯಾಂಕುಗಳು ; ಶೈಕ್ಷಣಿಕ ಸಂಸ್ಥೆಗಳು ; ಲೋಕೋಪಯೋಗಿ ಇಲಾಖೆ ; ತಾಲೂಕು ಆಫೀಸು – ಹೀಗೆ ಅಸಂಖ್ಯ ಉದ್ಯೋಗಗಳಲ್ಲಿ ಮಹಿಳೆಯರು ತೊಡಗಿಸಿಕೊಂಡಿದ್ದಾರೆ. ಆಧುನಿಕ ಚರಿತ್ರೆಯು ಸ್ತ್ರೀ – ಪುರುಷರಿಬ್ಬರ ಮೇಲೂ ಈ ರೀತಿಯ ಒತ್ತಡವನ್ನು ಹೇರಿದೆ. ಮನೆಯ ಹೊರಗೆ ದುಡಿಯಬೇಕಾದ ಅವಶ್ಯಕತೆಯೇನು ಎಂದು ಕೇಳುವವರು ಕಡಿಮೆ. ಕೇಳುವವರು ಇಲ್ಲವೆಂದಲ್ಲ. ಆದರೆ ಆ ರೀತಿಯಲ್ಲಿ ಯೋಚಿಸುವ ಪುರುಷರ ಸಂಖ್ಯೆ ಕಡಿಮೆಯಾಗಿದೆ. ಇದರಿಂದ ಮಹಿಳೆಯರ ದೇಹ ಮತ್ತು ಮನಸ್ಸಿನ ಮೇಲೆ ಬೇರೆ ಬೇರೆ ಒತ್ತಡಗಳು ಬೀಳತೊಡಗಿವೆ. ಮನೆಯ ಹೊರಗೆ ಕಛೇರಿಯ ಕೆಲಸ ; ಮನೆಯ ಒಳಗೆ ಅಡುಗೆ ಕೆಲಸ ; ಮಕ್ಕಳ ಲಾಲನೆ ಪಾಲನೆ – ಹೀಗೆ ಎರಡು ಮೂರು ಕ್ಷೇತ್ರಗಳಲ್ಲಿ ಹೆಂಗಸರು ದುಡಿಯುತ್ತಾರೆ ಮತ್ತು ಅದರ ಪರಿಣಾಮ ಅನುಭವಿಸುತ್ತಾರೆ.

ಈ ತರಹದ ಒತ್ತಡವನ್ನು ಒಂದು 'ದುರಂತ ನಾಟಕ'ವೆಂದು ಕರೆಯಬೇಕಾಗಿಲ್ಲ. ಪರಿಸ್ಥಿತಿಯು ಹಾಗಿದೆ. ಹಳೆಯ ಸಾಮಾಜಿಕ ಪರಿಸ್ಥಿತಿಯಲ್ಲಿ ಮನೆಯ ಜಗುಲಿಯಿಂದ ; ಗಂಡನ ಕಣ್ಣುಗಳಿಂದ ಸಾಮಾಜಿಕ ಚಹರೆಗಳನ್ನು ಅರ್ಥಮಾಡಿಕೊಳ್ಳುತ್ತಿದ್ದ ಮಹಿಳೆಯರು ಈಗ ಪ್ರಭುತ್ವದ ಜೊತೆಗೆ ನೇರ ಮುಖಾಮುಖಿಯಾಗುತ್ತಿದ್ದಾರೆ. ಇದರಿಂದ ಅವರ ಅನುಭವಲೋಕವೂ ವಿಶಿಷ್ಟವಾಗಿದೆ. ಶಾಲೆಗೆ ಹೋಗದ ಪರಿಸ್ಥಿತಿಯು ಬೇರೆ – ಶಾಲೆಗೆ ಹೋಗಿ ಓದಿ ಬರೆದು – ಉದ್ಯೋಗ ಪಡೆದು ಬದುಕುವ ಪರಿಸ್ಥಿತಿಯು ಬೇರೆ. ಇಂಥ ಪರಿಸ್ಥಿತಿಯಿಂದಾಗಿ ಅನುಭವದ ನಿರೂಪಣೆಯನ್ನು ಭಾಷೆಯಲ್ಲಿ ಮಾಡುವಾಗ ಮಹಿಳೆಯರು ಬೇರೆ ಬೇರೆ ಮಾದರಿಗಳನ್ನು ಆಯ್ಕೆಮಾಡಿಕೊಳ್ಳಬೇಕಾಗಿ ಬಂತು. ಈ ಮಾದರಿಗಳಲ್ಲಿ ಕವಿತೆಗಳಿವೆ ; ಕಾದಂಬರಿಗಳಿವೆ ; ನಾಟಕಗಳಿವೆ. ನವ ಸಾಮಾಜಿಕ ಪರಿಸ್ಥಿತಿಯು ಅವರನ್ನು ಬರೆಯುವಂತೆ ಪ್ರೇರಣೆಯನ್ನು ನೀಡಿದೆ. ಬರವಣಿಗೆಯು ಕೂಡಾ ಅವರ ಸಾಮಾಜಿಕ ಸಂಬಂಧದ ನಿರ್ವಹಣೆಯಲ್ಲಿ ಒಂದು ಪ್ರಮುಖ ವಿಧಾನ.

ನಾಗವೇಣಿಯವರ 'ಗಾಂಧಿ ಬಂದ' ಒಂದು ವಾಸ್ತವತಾವಾದಿ ಕಾದಂಬರಿಯೆಂದು ಕರೆದೆ. ಅದರಲ್ಲಿ ಪ್ರಭುತ್ವದ ಅಧಿಕಾರ ಕೇಂದ್ರವನ್ನು, ಅವರ ನಿಯಮಾವಳಿಗಳನ್ನು ನಿರ್ದಿಷ್ಟ ಅನುಭವಗಳ ಮೂಲಕ ಮಂಡಿಸಿದ ಕ್ರಮವು ಅನನ್ಯವಾಗಿದೆ. ಕನ್ನಡದಲ್ಲಿ ವಾಸ್ತವತಾವಾದಕ್ಕೆ ಒಂದು ಪರಂಪರೆಯಿದೆ : ಅದು ಬೋಳಾರ ಬಾಬುರಾಯರು ; ಗುಲ್ವಾಡಿಯವರು ಮುಂತಾದವರಿಂದ ಮೊಳಕೆ ಹುಟ್ಟಿ ಕಾರಂತರ ಕಾದಂಬರಿಗಳ

ಹೊತ್ತಿಗೆ ಹೆಮ್ಮರವಾಗಿ ಬೆಳೆದಿದೆ. ಅನೇಕ ಲೇಖಕರು ಅದರ ನೆರಳಿನಲ್ಲಿ ಆಶ್ರಯ ಪಡೆದರು. ಆದರೆ ಸ್ತ್ರೀಯರು ಈ ವಾಸ್ತವತೆಯ ಹಾದಿಯನ್ನು ಆಯ್ಕೆ ಮಾಡಿಕೊಂಡು ಬರೆಯುವ ಪ್ರಯತ್ನ ಮಾಡಿರಲಿಲ್ಲ. ಚಂಪಾವತಿ ; ಸಾರಾ ; ಎಚ್. ನಾಗವೇಣಿಯವರು ಈ ಹಾದಿಯನ್ನು ಆಯ್ಕೆ ಮಾಡಿಕೊಂಡರು. ಮತ್ತು ಅದೇ ಅಭಿವ್ಯಕ್ತಿಯ ಮಾರ್ಗದಲ್ಲಿ ಹೆಣ್ತನದ ಅನುಭವವನ್ನು ವಿಶಿಷ್ಟವಾಗಿ ಮಂಡಿಸಿದರು. ಈ ಮಂಡನೆಯ ಕ್ರಮದಲ್ಲಿಯೇ – ಮಂಡನೆಯ ಕ್ರಮ ; ಮಂಡನೆಯಾದ ವಸ್ತು ; ವಿಷಯಗಳು ಎಲ್ಲವೂ ವಸಾಹತೋತ್ತರ ಸಂದರ್ಭದ ಪ್ರಮುಖ ಸಂಗತಿಗಳನ್ನು ಒಳಗೊಂಡವು. ಮೀಯುವ ಆಟ ಕಥಾ ಸಂಕಲವೂ ಕೂಡಾ ಅಷ್ಟೆ : ವಿಶಿಷ್ಟ ಅನುಭವಗಳ – ವಿಶಿಷ್ಟ ಮಂಡನೆಗಳಾಗಿವೆ.

'ಹೆಂಗಸರ ಬುದ್ಧಿ ಮೊಣಕಾಲ ಕೆಳಗೆ ' 'ಹೆಂಗಸರೆಂದರೆ ಚಂಚಲೆಯರು' 'ಹೆಂಗಸರಲ್ಲಿ ಗುಟ್ಟು ಬಿಡಬಾರದು' ಎನ್ನುವುದು ನಮ್ಮ ಸಾಂಪ್ರದಾಯಿಕ ಸಮಾಜದ ನಂಬಿಕೆಗಳು. ಅದಕ್ಕೆ ತದ್ವಿರುದ್ಧವಾಗಿ 'ಗಂಡಸೆಂದರೆ ದುಷ್ಟರು' 'ಅವರು ನಂಬಿಕೆಗೆ ಅರ್ಹರಲ್ಲ 'ವೆಂದು ಹೇಳಿದರೆ ಅದೊಂದು ಸರಳ ದ್ವಂದ್ವವಿಟ್ಟ ಹಾಗೆ. ಈ ಥರದ ಸರಳ ದ್ವಂದ್ವದಿಂದ ಪಾರಾಗಿ ಮೂರನೆಯ ನೆಲೆಯನ್ನು ವಾಸ್ತವದ ದೃಷ್ಟಿಕೋನದಿಂದ ಮಂಡಿಸುವುದು ನಾಗವೇಣಿಯವರ ಕತೆಗಳಲ್ಲಿ ಎದ್ದು ಕಾಣಿಸುತ್ತದೆ. ಅಂದರೆ ಅತ್ಯಂತ ಸರಳ ದ್ವಂದ್ವದಿಂದ ಅವರ ಕತೆಗಳು ಪಾರಾಗಿವೆ. 'ಮೀಯುವ ಆಟ'ದ ಕತೆಗಳಲ್ಲಿ ಬರುವ ಗಂಡಸರಲ್ಲಿ ಮತ್ತು ಹೆಂಗಸರಲ್ಲಿ ಒಳ್ಳೆಯವರಿದ್ದಾರೆ. ಹಾಗೆಯೇ ಕೆಟ್ಟವರೂ ಇದ್ದಾರೆ. ಒಳ್ಳೆಯತನ ಮತ್ತು ಕೆಡುಕುತನ ಎನ್ನುವುದು ಆಯಾ ಸಂದರ್ಭದ ಹಿನ್ನೆಲೆಯಿಂದ ನಿರ್ವಚನಕ್ಕೆ ಗುರಿಯಾಗುವ ಪದಗಳಾಗಿವೆ.

ಭಾರತೀಯ ನಾಗರಿಕ ಸಮಾಜವು ಅದರ ರಾಜಕೀಯ ಉದ್ದೇಶಕ್ಕೆ ತಕ್ಕಂತೆ ಸ್ತ್ರೀತ್ವವನ್ನು ವ್ಯಾಖ್ಯಾನಿಸಿದೆ. ಹಾಗೆಯೇ ಬಂಡವಾಳವಾದಿ ವ್ಯಾಪಾರಿ ಧೋರಣೆಯು ಕೂಡಾ ಹೆಣ್ತನವನ್ನು ತನಗೆ ಬೇಕಾದಂತೆ ನಿರ್ವಚಿಸಿದೆ. ಎರಡೂ ನಿರ್ವಚನಗಳಿಗೂ ಮಿತಿಗಳಿವೆ. ಎರಡನೆಯದು ಹೆಣ್ತನವನ್ನು ಮಾರುಕಟ್ಟೆಗೆ ಬೇಕಾದಂತೆ ವ್ಯಾಖ್ಯಾನಿಸುತ್ತದೆ. ಮೊದಲನೆಯದಕ್ಕೆ ರಾಜಕೀಯ ಉದ್ದೇಶವು ಪ್ರಧಾನವಾಗಿದೆ. ಹೆಚ್ಚಿನ ಲೇಖಕಿಯರು ಈ ಎರಡೂ ನಿಯಂತ್ರಣಗಳನ್ನು ತಮ್ಮ ಬರಹಗಳಲ್ಲಿ ಪ್ರಶ್ನಿಸಿದ್ದಾರೆ. ನಾಗವೇಣಿಯವರು ಕೂಡಾ 'ಮೀಯುವ ಆಟ'ದ ಕತೆಗಳ ಮುಖೇನ ಈ ಇರಾದೆಗಳನ್ನು ಪ್ರಶ್ನಿಸಿದ್ದಾರೆ. ದೊಡ್ಡ ಮಟ್ಟದ ರಾಜಕೀಯ ವ್ಯಾಖ್ಯೆಗಳಲ್ಲಿ ಹೆಣ್ಣು ರಾಜಕೀಯದ ಬಲಿ ಪಶು. ಮಾರುಕಟ್ಟೆಯಲ್ಲಿ ಹೆಣ್ಣೆಂದರೆ ಉಪಭೋಗದ ಸಾಮಗ್ರಿ. ಹೆಣ್ಣುತನವೆನ್ನುವುದಕ್ಕೆ ಬೇರೆ ಆಯಾಮಗಳೂ ಇವೆ. ಬೇರೆ ಮಾತಿನಲ್ಲಿ ಹೇಳಬೇಕೆಂದರೆ ನಾಗವೇಣಿಯವರ ಕತೆಗಳಲ್ಲಿ ಬೇರೆ ಬೇರೆ ರೀತಿಯ ಹೆಣ್ತನದ ನಿರ್ವಚನಗಳಿವೆ. ತಾಯಿಯಾಗಿರುವುದು ಬೇರೆ ; ಹೆಂಡತಿಯಾಗಿರುವುದು ಬೇರೆ ; ಒಕ್ಕಲಗಿತ್ತಿಯಾಗಿರುವುದು ಬೇರೆ ಎಂಬ ಅರಿವು ನಾಗವೇಣಿಯವರಿಗಿದೆ. ಇದು ತುಂಬಾ ಪ್ರಮುಖವಾದ ಅರಿವು ಕೂಡಾ ಹೌದು. ಅಂದರೆ ಮಹಿಳೆಯ ಕುರಿತು ರಾಜಕೀಯ ಮತ್ತು ಮಾರುಕಟ್ಟೆಯ ವ್ಯಾಖ್ಯೆಗಿಂತ

ಭಿನ್ನವಾದ ಬೇರೆ ಬೇರೆ ವ್ಯಾಖ್ಯೆಗಳು ಸಾಧ್ಯ. ನಾಗವೇಣಿಯವರು ಕತೆಗಳಲ್ಲಿ ಮಾಡುವುದು ಕೂಡಾ ಅದುವೇ. ಆದುದರಿಂದ ಅವರ ಕತೆಗಳಲ್ಲಿ ಅನೇಕ ಮುಖಗಳುಳ್ಳ ಮಹಿಳೆಯರ ಮತ್ತು ಹೆಣ್ತನದ ಪರಿಚಯವಾಗುತ್ತದೆ.

ವಸಾಹತು ಸಂದರ್ಭ ಮತ್ತು ವಸಾಹತೋತ್ತರ ಸಂದರ್ಭದಲ್ಲಿ ಸ್ತ್ರೀಯರ ಪ್ರಶ್ನೆಯು ಹೇಗಿದೆ ಎಂದು ನಾವು ಯೋಚಿಸಬೇಕು. ವಸಾಹತು ಸಂದರ್ಭದಲ್ಲಿ ಮಹಿಳೆಯರು ಎರಡು ರೀತಿಯ ವಸಾಹತು ಪ್ರಭುತ್ವದ ಪರಿಚಯಕ್ಕೆ ಗುರಿಯಾಗಬೇಕಾಯಿತು. ಒಂದು ಬ್ರಿಟೀಶ್ ಪ್ರಭುತ್ವ ಮತ್ತೊಂದು ಸ್ಥಳೀಯ – ಪುರುಷ ಕೇಂದ್ರಿತ ಪ್ರಭುತ್ವ. ಈ ಎರಡೂ ಪ್ರಭುತ್ವಗಳು ಮಹಿಳೆಯರ ದೃಷ್ಟಿಯಿಂದ ಕೇಡಿನವುಗಳು. ವಸಾಹತೋತ್ತರ ಸಂದರ್ಭದಲ್ಲಿ ಮಹಿಳಾ ಸಮಸ್ಯೆ ತುಂಬಾ ಸಂಕೀರ್ಣವಾಯಿತು. ಮಹಿಳಾ ಸಮಸ್ಯೆಗೆ – ಜಾಗತೀಕರಣ ; ಕೋಮುವಾದ ; ಜಾತಿ ; ಮಾರುಕಟ್ಟೆ ; ಪ್ರಾದೇಶಿಕತೆ ; ಕುಟುಂಬ – ಎಲ್ಲವೂ ಮುಖ್ಯ ಕಾರಣಗಳು. ಮಹಿಳಾ ಅನನ್ಯತೆಯ ದೃಷ್ಟಿಯಿಂದ ಇವು ಪ್ರಮುಖ ಸಮಸ್ಯೆಗಳಾಗಿವೆ. ಅಂದರೆ ತಿರುಮಲಾಂಬಾ ಅವರಿಗಿದ್ದ ಸಮಸ್ಯೆಗೂ ನಾಗವೇಣಿಯವರು ಎದುರಿಸುವ ಸಮಸ್ಯೆಗೂ ಅಜಗಜಾಂತರ ವ್ಯತ್ಯಾಸವಿದೆ. ನಾಗವೇಣಿಯವರ ಕಥನ ಪ್ರಪಂಚ ವಸಾಹತು ಕಾಲ ಮತ್ತು ವಸಾಹತೋತ್ತರ ಕಾಲದ ಸಮಸ್ಯೆಗಳ ಬಗ್ಗೆ ಮಹಿಳಾವಾದಿ ಪ್ರತಿಕ್ರಿಯೆಗಳಾಗಿವೆ. ಈ ಪ್ರತಿಕ್ರಿಯೆಗಳು ವಸಾಹತು ಸಂದರ್ಭದಲ್ಲಿ ಆಗ ಬರೆಯುತ್ತಿದ್ದ ಲೇಖಕಿಯರಿಗಿಂತ ಭಿನ್ನ. ನಾಗವೇಣಿಯವರ 'ಗಾಂಧಿ ಬಂದ ' ಕಾದಂಬರಿಯಲ್ಲಿ ಬರುವ ಚಿತ್ರಗಳು ವಸಾಹತು ಕಾಲದ ಪ್ರತಿಕ್ರಿಯೆಗಳು. ಈ ಸಂಕಲನದ 'ಒಡವೆ ' ಕತೆಯನ್ನು ಈ ಹಿನ್ನೆಲೆಯಿಂದ ಗಮನಿಸಬಹುದು. ಈ ಕಥಾ ಸಂಕಲನದಲ್ಲಿ ಬರುವ 'ಧಣಿಗಳ ಬೆಳ್ಳಿ ಲೋಟ' ಒಂದರ್ಥದಲ್ಲಿ ದ್ವಿವಸಾಹತುಶಾಹಿ ಧೋರಣೆಯ ಬಗೆಗಿನ ಪ್ರತಿಕ್ರಿಯೆಯಾಗಿದೆ. ಉದಾಹರಣೆಗೆ 'ಮೀಯುವ ಆಟ' 'ತಾಯ್ತನ 'ದಂಥ ಕತೆಗಳು ವಸಾಹತೋತ್ತರ ಸಂದರ್ಭದ ಪ್ರಮುಖ ಸ್ತ್ರೀವಾದಿ ಪ್ರತಿಕ್ರಿಯೆಗಳಾಗಿವೆ.

ಇನ್ನೊಂದು ಅಂಶವನ್ನು ಗಮನಿಸಬಹುದು. ಮೂರನೆಯ ಜಗತ್ತಿನ ಸ್ತ್ರೀಯರ ಸ್ವ ಅನನ್ಯತೆಯ ಮಾದರಿಗಳು ಬೇರೆ ಬೇರೆ ಸಮಸ್ಯೆಗಳನ್ನು ಒಳಗೊಂಡಿವೆ. ಅನಕ್ಷರತೆ ; ಬಡತನ ; ದೇಹ ವ್ಯಾಪಾರ ; ಪ್ರಾದೇಶಿಕ ಸಮಸ್ಯೆ ; ದೇಹಕ್ಕೆ ಸಂಬಂಧಿಸಿದ ಸಮಸ್ಯೆಗಳು ; ಕೋಮುವಾದಿ – ಇತ್ಯಾದಿ. ಇವುಗಳು ಪ್ರತ್ಯಕ್ಷವಾಗಿ ಮತ್ತೆ ಕೆಲವೊಮ್ಮೆ ಪರೋಕ್ಷವಾಗಿ ಪ್ರಭಾವ ಬೀರಿವೆ. ನಾಗವೇಣಿಯವರ ಕಥನ ಪ್ರಪಂಚದ ಮೂಲ ನೆಲೆಗಳು ಇವು. ಆದುದರಿಂದ ನಾಗವೇಣಿಯವರ ಕತೆಗಳ ಬಹಿರ್ಮುಖತೆಯು ಏಕ ಕಾಲಕ್ಕೆ ಸಾಮಾಜಿಕ ಹಾಗೂ ವಸಾಹತೋತ್ತರ ಸಂದರ್ಭಕ್ಕೆ ಬಂದ ಪ್ರತಿಕ್ರಿಯೆಗಳಾಗಿವೆ. ಧಣಿಗಳ 'ಬೆಳ್ಳಿ ಲೋಟ'ದ ಚಿನ್ನಮ್ಮ ; 'ಸೇವಂತಿ ಓಲೆ' ಯ ಸೇವಂತಿ ; 'ತಾಯ್ತನ ' ಕತೆಗಳನ್ನು ಈ ಹಿನ್ನೆಲೆಯಲ್ಲಿ ಗ್ರಹಿಸಿದಾಗ ಅರ್ಥಪೂರ್ಣವೆನಿಸುತ್ತದೆ.

ನಾಗವೇಣಿಯವರು ವಿವರಿಸುವ ಸಮಾಜ ಒಂದು ವಿಧಾನದಲ್ಲಿ ಹಾಜರಾಗಿದೆ. ಅದನ್ನು "ಪಠ್ಯದಲ್ಲಿ ಹಾಜರಾದ ಸಮಾಜ "ವೆಂದು ನಾವು ಕರೆಯಬಹುದು. ಆದರೆ

